ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ-1 ಮತ್ತು ಭಾಗ-2

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-2000

ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ-1 ಮತ್ತು ಭಾಗ-2ನ್ನು ಅನುಸರಿಸಲಾಗುವುದು.

ಭೂಸ್ವಾಧೀನ ಕಾಯ್ದೆ, ಉಗ್ರಾಣ ಕೈಪಿಡಿ, ಮಧ್ಯಸ್ಥಿಕೆ ಕಾಯ್ದೆ 1996 ಮತ್ತು 1940, ಕರ್ನಾಟಕ ನೀರಾವರಿ ಕಾಯ್ದೆ 1965, ಐಎಸ್ ಕೋಡ್ಸ್, ಸಾದಿಲ್ವಾರು ವೆಚ್ಚದ ಕೈಪಿಡಿ, ಕರ್ನಾಟಕ ಖಜಾನೆ ಸಂಹಿತೆ, ಚಾಲ್ತಿ ದರಪಟ್ಟಿ, ಬಜೆಟ್ ಕೈಪಿಡಿ, ಹೆದ್ದಾರಿ ಕಾಯ್ದೆ 1964ರ ನಿಯಮಗಳು.

**ಕೈಪಿಡಿ-6**

**ಇಲಾಖೆಯ ಅಧೀನದಲ್ಲಿರುವ ವರ್ಗೀಕರಣದ ತಃಖ್ತೆ**

**ತಾಂತ್ರಿಕೆ ಶಾಖೆ:**

1. ಕಾರ್ಯನಿರ್ವಾಹಕ ಇಂಜನೀಯರವರ, ಅಧೀಕ್ಷಕ ಇಂಜನೀಯರವರ ಮತ್ತು ಮುಖ್ಯ ಇಂಜನೀಯರವರ ಮಟ್ಟದಲ್ಲಿ ಮಂಜೂರಾದ ಅಂದಾಜು ಪತ್ರಿಕೆಗಳು ಮತ್ತು ಅದಕ್ಕೆ ಸಂಬಂಧಪಟ್ಟ ಕಡತಗಳು.
2. ಪ್ರಗತಿಯ ವರದಿಗಳು
3. ಆಯವ್ಯಯಕ್ಕೆ ಸಂಬಂಧಪಟ್ಟ ಆಯವ್ಯಯ ಪ್ರಸ್ತಾವನೆ ಮತ್ತು ಆಯವ್ಯಯ ಪಟ್ಟಿ
4. ಭಾರಿ ಹಾಗೂ ಸಣ್ಣ ಅಂದಾಜುಗಳ ಮಂಜೂರಾತಿ ವಹಿ
5. ಪಿಡಬ್ಲ್ಯೂಡಿ ವಶದಲ್ಲಿರುವ ಸೇತುವೆ ಮತ್ತು ಕಲ್ವರ್ಟ್‌ಗಳ ವಹಿ
6. ದರ ಸೂಚಿ
7. ಎಂ.ಎಂ.ಆರ್. ಪುಸ್ತಕ
8. ಆಯವ್ಯಯ ಕಾಮಗಾರಿಗಳ ವಹಿ
9. ಟೆಂಡರ್‌ಗಳ ವಹಿ
10. ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜುಗಳ ಪಟ್ಟಿ
11. ಹೆಚ್ಚುವರಿ ಐಟಂ ದರ ಪಟ್ಟಿಯ ವಹಿ

**ಪಿ.ಬಿ. ಯಲ್ಲಿರುವ ರಜಿಸ್ಟರ್ ಮಾಹಿತಿ:**

12. ತುಂಡು ಗುತ್ತಿಗೆ ಪತ್ರ ಅನುಮೋದನೆ ರಜಿಸ್ಟರ್
13. ಸೇತುವೆಗಳ ರಜಿಸ್ಟರ್
14. ಕಟ್ಟಡಗಳ ರಜಿಸ್ಟರ್
15. ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜು ಪತ್ರಿಕೆಗಳ ರಜಿಸ್ಟರ್
16. ಕಟ್ಟಡಗಳ ಬಾಡಿಗೆ ನಿಗದಿಪಡಿಸುವ ರಜಿಸ್ಟರ್.

**ದಾಖಲೆಗಳು: ಆಡಳಿತ ಶಾಖೆ:**

**ಉಪ ವಿಭಾಗ ಕಛೇರಿಯ ತಪಾಸಣೆಗೆ ಅಗತ್ಯವಿರುವ ವಹಿಗಳು ಮತ್ತು ದಾಖಲಾತಿಗಳ ಪಟ್ಟಿ.**

1. ಹಾಜರಾತಿ ವಹಿ.
2. ಪತ್ರಾಂಕಿತ ವಲ್ಲದ ಅಧಿಕಾರಿಗಳ ಸಾಂದರ್ಭಿಕ ರಜೆ ವಹಿ ಮತ್ತು ಸಾಂದರ್ಭಿಕ ರಜೆ ಕಡತ ಅರ್ಜಿಗಳೊಂದಿಗೆ.
3. ಸಂಘಟನಾ.
4. ಮಂಜೂರಾದ ಕಾರ್ಯನಿರ್ವಹಿಸುತ್ತಿರುವ ಮತ್ತು ಖಾಲಿ ಹುದ್ದೆಗಳ ತಖ್ತೆ.
5. ಕೆಲಸ ವಿತರಣ ತಖ್ತೆ.
6. ವೇತನ ಬಡ್ತಿಯ ನಿಗಾ ವಹಿ.
7. ವೇತನ ಬಡ್ತಿಯ ಮಂಜೂರಾತಿ ವಹಿ.
8. ಇನ್ ಕಂಟೆನ್ಸಿ ವಹಿ.
9. ರಹಸ್ಯ ವರದಿಗಳ ವಹಿ.
10. ಆಸ್ತಿ ಮತ್ತು ದಾಯತ್ವ ತಖ್ತೆ ವಹಿ.
11. ಮಹಾಲೇಖಪಾಲರು ಮತ್ತು ಇತರರಿಗೆ ಕಳುಹಿಸಲಾದ ನಿವೃತ್ತಿ ವೇತನ ಪತ್ರಗಳ ನಿಗಾ ವಹಿ.
12. ಸೇವಾ ವಹಿ.
13. ಇಲಾಖಾ ಪರೀಕ್ಷೆಗಳ ನಿಗಾ ವಹಿ.
14. ಪರಿವೀಕ್ಷಣಾ ಟಿಪ್ಪಣಿ ಪುಸ್ತಕ.
15. ಕಛೇರಿ ನೌಕರರ ಮನೆಗಳ ವಿಳಾಸ.
16. ವಿಧಾನ ಸಭೆ: ಪರಿಷತ್ ಪ್ರಶ್ನೆಗಳ ವಹಿ.
17. ವೈಯಕ್ತಿಕ ವಹಿ.

18. ಪ್ರತಿ ಮಾಹೆಗಳ ಬಾಕಿ ಪಟ್ಟಿ.
19. ಸ್ಟಾಂಪು ವಹಿ ಪರಿವೀಕ್ಷಣಾ ದಿನದಂದು ಬಾಕಿ ಇರುವ ಸ್ಟಾಂಪುಗಳ ಮತ್ತು ಸ್ಟಾಂಪುಗಳ ಬೆಲೆಯನ್ನು ತೋರಿಸುವ ತಖ್ತೆ.
20. ಸಾಮಾನ್ಯ ಸ್ವೀಕೃತಿ ವಹಿ.
21. ರವಾನೆ ವಹಿ.
22. ಸ್ಥಳೀಯ ವಿತರಣಾ ರವಾನೆ.
23. ಕಛೇರಿ ಆದೇಶ ಪುಸ್ತಕ.
24. ಸಾಮಾನ್ಯ ನಗದು ಪುಸ್ತಕ.
25. ಪಾವತಿ ವಹಿ.
26. ನಗದೀಕರಣ ವಹಿ.
27. ವೇತನ ಬಟವಾಡೆ ವಹಿ.
28. ಪಾವತಿಯಾಗದ ವೇತನ.
29. ಪ್ರಯಾಣ ಭತ್ಯೆ ಬಟವಾಡೆ ವಹಿ.
30. ಸಾದಿಲ್ವಾರು ವೆಚ್ಚ ವಹಿ ವೋಚರ್‌ಗಳ ಸಂಹಿತೆ.

**ಲೆಕ್ಕ ಶಾಖೆ:**

(1) ನಗದು ಪುಸ್ತಕ, (2) ಚೆಕ್ ಮೇಮೊ ಪುಸ್ತಕ, (3) ಎಲ್.ಓ.ಸಿ. ರಿಜಿಸ್ಟರ್, (4) ರೆಮಿಟೆನ್ಸ್ ರಿಜಿಸ್ಟರ್, (5) ಚೆಕ್ ರಿಶೀವಡ್ ರಿಜಿಸ್ಟರ್, (6) ಎಸ್.ಬಿ.ಆರ್. ರಿಜಿಸ್ಟರ್, (7) ಬಾಡಿಗೆ ರಿಜಿಸ್ಟರ್, (8) ಖಾಲಿ ಅಳತೆ ಪುಸ್ತಕಗಳ ವಹಿ, (9) ಎಂ.ಪಿ.ಡಬ್ಲ್ಯೂ ರಜಿಸ್ಟರ್, (10) ಟಿ.ಇ.ಓ. ರಿಜಿಸ್ಟರ್, (11) ವರ್ಕ್ಸ್ ರಿಜಿಸ್ಟರ್, (12) ನಮೂನೆ-81, (13) ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕೆ.

**ಉಗ್ರಾಣ ಶಾಖೆ:**

1. ದಾಸ್ತಾನು ಸ್ವೀಕೃತಿ ವಹಿ (ಪಿಡಬ್ಲ್ಯೂಎ-4)
2. ದಾಸ್ತಾನು ವಿತರಣಾ ವಹಿ (ಪಿಡಬ್ಲ್ಯೂಎ-4)
3. ದಾಸ್ತಾನು ಖರೀದಿ ಪುಸ್ತಕ
4. ಅರ್ಧ ವಾರ್ಷಿಕ ನಿಯತಕಾಲಿಕ ವಹಿ (ಪಿಡಬ್ಲ್ಯೂಎ-15)
5. ಖಾಲಿ ಸಾಮಗ್ರಿಗಳ (ಖಾಲಿ ಸಿಮೆಂಟ್ ಚೀಲ ಖಾಲಿ ಡಾಂಬರ್ ಬ್ಯಾರಲ್ಲುಗಳ ವಹಿ (ಎಸ್.ಎಂ.ಜಿ. -7)
6. ಖಾಲಿ ಅಳತೆ ಪುಸ್ತಕಗಳ ವಹಿ (ಪಿಡಬ್ಲ್ಯೂಜಿ-28)
7. ಲೇಖನ ಸಾಮಗ್ರಿಗಳ ಸ್ವೀಕೃತಿ ಮತ್ತು ವಿತರಣಾ ವಹಿ)
8. ಕಛೇರಿ ಪಿಠೋಪಕರಣಗಳ ವಹಿ (ಕೆಎಫ್‌ಸಿ-34 ಎ)
9. ಉಪಕರಣ ಮತ್ತು ಸ್ಥಿರ ಯಂತ್ರಗಳ ಸ್ವೀಕೃತಿ ವಹಿ (ಪಿಡಬ್ಲ್ಯೂಎ-4)
10. ಉಪಕರಣ ಮತ್ತು ಸ್ಥಿರಯಂತ್ರಗಳ ವಿತರಣಾ ವಹಿ (ಪಿಡಬ್ಲ್ಯೂಎ-4)
11. ಸೆಪ್ಟೆಂಬರ್ ಅಂತ್ಯದ ಉಪಕರಣ ಮತ್ತು ಸ್ಥಿರಯಂತ್ರಗಳ ವಾರ್ಷಿಕ ನಿಯತಕಾಲಿಕೆ (ಪಿಡಬ್ಲ್ಯೂ-17)
12. ಅಳತೆ ಪುಸ್ತಕಗಳ ಅರ್ಧ ವಾರ್ಷಿಕ ನಿಯತಕಾಲಿಕ (ಪಿಡಬ್ಲ್ಯೂಜಿ-29)
13. ಬಿಡುಗಡೆಯಾದ ಸಾಮಗ್ರಿಗಳ ಲೆಕ್ಕದ ವಹಿ.

## ಅರೆ ಖಾಯಂ ಮಾಹಿತಿ

## ಕೈಪಿಡಿ 7 ರಿಂದ 17

### ಕೈಪಿಡಿ-7

ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಂದ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ ಮತ್ತು ವಿವರ.

ಏನು ಇರುವುದಿಲ್ಲ.

### ಕೈಪಿಡಿ-8

ಇಲಾಖೆಯಲ್ಲಿ ನಿಗಮ/ ಪರಿಷತ್ತು/ ಸಮಿತಿ ಮತ್ತು ಇತರ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ಮತ್ತು ಸಭೆಯ ನಡುವಳಿಗಳು ಸಾರ್ವಜನಿಕರಿಗೆ ಲಭ್ಯವಿರುವ ಬಗ್ಗೆ.

ಏನು ಇರುವುದಿಲ್ಲ.

### ಕೈಪಿಡಿ-9

### ಇಲಾಖೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ

ಈ ಇಲಾಖೆಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ ಇವರ ಅಧಿಕಾರದ ಬಗ್ಗೆ ಕೈಪಿಡಿ-2 ರಲ್ಲಿ ಈಗಾಗಲೇ ತಿಳಿಸಲಾಗಿದೆ.

**ಸಿಬ್ಬಂದಿ ವರ್ಗದ ನಿರ್ದೇಶಿಕೆ (ಸಂಘಟನಾ ನಕ್ಷೆ) ಈ ಕೆಳಗೆ ನೀಡಿದೆ.**

| ಕ್ರ.ಸಂ. | ಹುದ್ದೆ | ಹೆಸರು |
|---|---|---|
| 1. | ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ-1 | ಶ್ರೀ ಜಿ.ಆರ್. ಸೋಮನಗೌಡರ |
| 2. | ಸಹಾಯಕ ಇಂಜನೀಯರರು-2 | 1) ಶ್ರೀ ಜೆ.ಆರ್. ಐವಳ್ಳಿ<br>2) ಶ್ರೀ ಎಂ.ಆಯ್. ದಫೇದಾರ ನಿಯೋಜನೆ ಮೇಲೆ ವೃತ್ತ ಕಛೇರಿ, ಧಾರವಾಡದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.<br>3) ಶ್ರೀ ಸಿ. ಮಲ್ಲಿಕಾರ್ಜುನ ನಿಯೋಜನೆಯ ಮೇಲೆ ಲೋ.ಇ. ಉಪವಿಭಾಗ ಯಾದಗೀರದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.<br>4) ಶ್ರೀ ಎಸ್.ವಾಯ್. ಕಾಂಬಳೆ |
| 3. | ಕಿರಿಯ ಇಂಜನೀಯರರು-2 | 1) ಶ್ರೀ ವಾಯ್.ಎಸ್.ಮಡಿವಾಳರ<br>2) ಶ್ರೀ ಎಸ್.ಕೆ. ಜವಳಗದ್ದಿ ನಿಯೋಜನೆಯ ಮೇಲೆ ಲೋ.ಇ. ಉಪವಿಭಾಗ ರಾಮದುರ್ಗದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. |
| 4. | ಪ್ರಥಮ ದರ್ಜೆ ಭೂಮಾಪಕರು-1 | - ಖಾಲಿ ಇರುತ್ತದೆ- |
| 5. | ಪ್ರಥಮ ದರ್ಜೆ ಸಹಾಯಕರು-1 | ಶ್ರೀ ಎಂ.ಎಸ್. ಯಾಳಗಿ |
| 6. | ದ್ವಿತೀಯ ದರ್ಜೆ ಸಹಾಯಕರು-1 | ಶ್ರೀ ಡಿ.ಬಿ. ಜಾವೂರ |
| 7. | ಬೆರಳಚ್ಚುಗಾರರು-1 | ಶ್ರೀ ಡಿ.ಡಿ. ತೇರದಾಳ |
| 8. | ಜವಾನರು-1 | -ಖಾಲಿ ಇರುತ್ತದೆ- |
| 9. | ಕಾವಲುಗಾರ-1 | ಶ್ರೀಮತಿ ಲಕ್ಷ್ಮಿ.ಹೆಚ್. ಮಾನೆ ಜವಾನ ಇವರನ್ನು ಪರಿಗಣಿಸಲಾಗಿದೆ ಸದರಿಯವರು ನಿಯೋಜನೆಯ ಮೇಲೆ ಲೋ.ಇ. ಉಪವಿಭಾಗ ಹಳಿಯಾಳದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. |
| | **ಸೂಪರನ್ಯೂಮರರಿ ಹುದ್ದೆಗಳು** | |
| 1) | ಕೆಲಸ ನಿರೀಕ್ಷಕರು-1 | ಶ್ರೀ ಡಿ.ಎಂ. ಹಿರೇಮಠ |

**ಕೈಪಿಡಿ-10**

**ಇಲಾಖೆಯ ಅಧಿಕಾರಿಗಳ ಮತ್ತು ಸಿಬ್ಬಂದಿ ವರ್ಗದವರ ತಿಂಗಳ ವೇತನ: ಪ್ರತಿಫಲ ಮತ್ತು ಅದನ್ನು ನೀಡುವ ಸೂತ್ರಗಳು**

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ ರವರ ಕಛೇರಿಯಲ್ಲಿರುವ ಅಧಿಕಾರಿ ಮತ್ತು ಸಿಬ್ಬಂದಿಗಳ ವೇತನವನ್ನು ಕರ್ನಾಟಕ ಸರ್ಕಾರದ ಸಂಚಿತ ನಿಧಿಯಿಂದ ಪಾವತಿಸಲಾಗುತ್ತಿದೆ.

| ಕ್ರ. ಸಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 1. | ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ-1 | ಶ್ರೀ ಜಿ.ಆರ್. ಸೋಮನಗೌಡರ | 7400-13120 | 12800 |
| 2. | ಸಹಾಯಕ ಇಂಜನೀಯರರು-4 | 1) ಶ್ರೀ ಜೆ.ಆರ್. ಐವಳ್ಳಿ<br>2) ಶ್ರೀ ಎಂ.ಆಯ್ ದಫೇದಾರ<br>3) ಶ್ರೀ ಸಿ.ಮಲ್ಲಿಕಾರ್ಜುನ<br>4) ಶ್ರೀ ಎಸ್.ವಾಯ್, ಕಾಂಬಳೆ | 6000-11200<br>-ಸದರ-<br>-ಸದರ-<br>-ಸದರ- | 11200<br>11840<br>6150<br>6150 |
| 3. | ಕಿರಿಯ ಇಂಜನೀಯರರು-2 | 1) ವಾಯ್.ಎಸ್. ಮಡಿವಾಳರ<br>2) ಎಸ್.ಕೆ. ಜವಳಗದ್ದಿ | 4575-8400<br>-ಸದರ- | 8200<br>6600<br>125 ಪಿಪಿ |
| 4. | ಪ್ರಥಮ ದರ್ಜೆ ಭೂಮಾಪಕರು-1 | -ಖಾಲಿ ಇರುತ್ತದೆ- | 3850-7050 | - |
| 5. | ಪ್ರಥಮ ದರ್ಜೆ ಸಹಾಯಕರು-1 | ಶ್ರೀ ಎಂ.ಎಸ್. ಯಾಳಗಿ | 3850-7050 | 4825<br>100 ಪಿಪಿ |
| 6. | ದ್ವಿತೀಯ ದರ್ಜೆ ಸಹಾಯಕರು-1 | ಶ್ರೀ ಡಿ.ಬಿ. ಜಾವೂರ | 3000-5450 | 5200 |

| ಕ್ರ. ಸಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 7. | ಬೆರಳಚ್ಚುಗಾರರು-1 | ಶ್ರೀ ಡಿ.ಡಿ.ತೇರದಾಳ | 3000-5450 | 3225<br>90 ವಿ.ಭ. |
| 8. | ಜವಾನರು-1 | -ಖಾಲಿ ಇರುತ್ತದೆ- | 2500-3850 | - |
| 9. | ಕಾವಲುಗಾರರು-1 | ಶ್ರೀಮತಿ ಲಕ್ಷ್ಮಿ ಹೆಚ್. ಮಾನೆ | 2500-3850 | 2600 |
| **ಸೂಪರನ್ಯೂಮರರಿ ಹುದ್ದೆಗಳು** | | | | |
| 1. | ಕೆಲಸ ನಿರೀಕ್ಷಕರು-1 | 1) ಡಿ.ಎಂ. ಹಿರೇಮಠ | 3000-5450 | 4450<br>75 ಪಿಪಿ |

**ಕೈಪಿಡಿ-11**

**ಇಲಾಖೆಯಲ್ಲಿರುವ ವಲಯ/ ವಿಭಾಗಗಳಿಗೆ ನೀಡಿದ ಆಯವ್ಯಯದ ವಿವರಗಳು**

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ ಲೋಇ ನರಗುಂದ ಉಪವಿಭಾಗಕ್ಕೆ ಸಂಬಂಧಿಸಿದಂತೆ 2003-04 ರಿಂದ 2005-06ರ ವರೆಗಿನ ಅನುದಾನ ಮತ್ತು ವೆಚ್ಚವನ್ನು ತೋರಿಸುವ ತಖ್ತೆ (ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಲೆಕ್ಕಶೀರ್ಷಿಕೆ | 2003-04 | | 2004-05 | | 2005-06 | |
|---|---|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ | ಅನುದಾನ | ವೆಚ್ಚ |
| | **ಬೃಹತ್ ಕಟ್ಟಡಗಳು** | | | | | | |
| 1. | 1) 4099 ಸಿಓ, ಆನ್ ಲೋ.ಇ. | - | 0.21 | - | - | - | - |
| | 2) -ಸದರ- | - | 0.56 | - | - | - | - |
| | 3) 4099 ನವೀಕರಣ | - | 0.21 | - | - | - | - |
| | 4) 4059 ನ್ಯಾಯ ಪರಿಪಾಲನೆ | - | - | - | - | - | 0.57 |
| 2. | 1) 4216 ಕೇಂದ್ರ ಸದಸ್ಯತ್ವ ಯೋಜನೆ ಸಿಎಸ್‌ಎಸ್. | 5.00 | 8.16 | 2.00 | 7.04 | - | 1.29 |
| | 2) ವಿಶೇಷ ದುರಸ್ತಿ | - | 4.13 | - | - | - | - |
| | 3) ಸಾಮಾನ್ಯ ದುರಸ್ತಿ | - | 1.45 | - | - | - | - |
| 3. | **10ನೇ ಹಣಕಾಸು ಯೋಜನೆ 2059-102 ನಿವಾಸಗಳಿಲ್ಲದ ಕಟ್ಟಡಗಳು (ಯೋಜನೇತರ)** | - | 10.85 | - | - | - | - |
| | 1) ವಿಶೇಷ ದುರಸ್ತಿ | - | 4.13 | - | - | - | - |
| | 2) ಸಾಮಾನ್ಯ ದುರಸ್ತಿ | - | 1.45 | 17.00 | 3.27 | 2.30 | 17.32 |
| | 3) 10ನೇ ಹಣಕಾಸು ಯೋಜನೆ | - | 10.83 | - | 5.33 | - | 0.43 |
| 4. | **2059 ವೇಯಿಕಲ್ಸ್ (ವಾಹನಗಳು)** | | | | | | |
| | 1) ವಾಹನ ದುರಸ್ತಿ | - | 0.04 | 0.20 | - | - | - |
| 5. | **3054 ರಸ್ತೆ ಮತ್ತು ಸೇತುವೆ ರಾಜ್ಯ ಹೆದ್ದಾರಿಗಳು** | | | | | | |
| | 1) ಸಾಮಾನ್ಯ ದುರಸ್ತಿ | - | 0.03 | 22.00 | 12.22 | - | 11.56 |
| 6) | **3054 ರಸ್ತೆ ಮತ್ತು ಸೇತುವೆ ಜಿ.ಮು. ರಸ್ತೆ** | | | | | | |
| | 1) ಸಾಮಾನ್ಯ ದುರಸ್ತಿ | - | 11.21 | 61.60 | 44.52 | 20.85 | 58.32 |
| | 2) ನವೀಕರಣ | - | 4.23 | - | 1.81 | - | - |
| | 3) ವಿಶೇಷ ದುರಸ್ತಿ | - | 3.03 | - | 1.00 | - | - |
| | 4) ಸೇತುವೆ ದುರಸ್ತಿ | - | 1.09 | - | - | - | 4.13 |
| 7) | **ಸೇತುವೆ ನಿರ್ಮಾಣ (75 ಕೋಟಿ) 5054 ನಬಾರ್ಡ್ ಸೇತುವೆ, ರಾಜ್ಯ ಹೆದ್ದಾರಿ** | | | | | | |
| | 1) ಇತರೆ ರಸ್ತೆ ನಿರ್ಮಾಣ | 2.00 | 1.76 | 0.40 | 0.34 | 20.00 | 28.86 |
| 8) | **ಸಂಪರ್ಕ ಇಲ್ಲದ ಗ್ರಾಮಗಳಿಗೆ ರಸ್ತೆ ನಿರ್ಮಾಣ** | - | 0.09 | - | - | - | - |
| 9) | **8443 ಠೇವಣಿ ವಂತಿಕೆ** | | | | | | |
| | 1) 8443 ಸಿ.ಎಂ. | 3.75 | 3.75 | 2.77 | 2.77 | - | - |
| 10) | **ಕೇಂದ್ರ ರಸ್ತೆ ನಿಧಿ** | - | - | - | - | 35.00 | - |
| 11) | **5054 ನಬಾರ್ಡ್** | - | - | - | 4.09 | - | - |
| | **ಒಟ್ಟು ಮೊತ್ತ ರೂ.** | **18.75** | **50.78** | **105.97** | **82.39** | **78.15** | **112.48** |

**ಲೋಕೋಪಯೋಗಿ ಇಲಾಖೆ**

**2005-06ನೇ ಸಾಲಿನ ಯೋಜನಾ ವೆಚ್ಚದ ಹಂಚಿಕೆ ವಿವರ (ರೂ. ಲಕ್ಷಗಳಲ್ಲಿ)**

| ಕ್ರ.ಸಂ. | ಲೆಕ್ಕ ಶೀರ್ಷಿಕೆ | ಲೋಇ ಉಪ ವಿಭಾಗ ನರಗುಂದ |
|---|---|---|
| | 5054 ರಸ್ತೆ ಮತ್ತು ಸೇತುವೆ | |
| 1. | 5054-03-337-0-02 ಇತರೆ ರಸ್ತೆ ನಿರ್ಮಾಣ | - |
| | 5054 ನಬಾರ್ಡ್ ಧನಸಹಾಯ ಕಾಮಗಾರಿಗಳು | - |
| 1. | 5054-04-800-3-01 ನಬಾರ್ಡ್ ಧನಸಹಾಯ ರಸ್ತೆ ಕಾಮಗಾರಿ | - |
| 2. | 5054-04-800-02 ನಬಾರ್ಡ್ ಧನಸಹಾಯ ಸೇತುವೆ ಕಾಮಗಾರಿ | - |
| | ಒಟ್ಟು | |
| 1. | 5054 ಕೇಂದ್ರ ರಸ್ತೆ ನಿಧಿ | - |
| 1. | 4059 ಲೋಇ ಕಾಮಗಾರಿಗಳ ಮೇಲಿನ ಬಂ ವೆಚ್ಚ<br>4059-80-051-0-05 ಲೋ.ಇ. ಕಾಮಗಾರಿ | - |
| 1. | 4216 ವಸತಿ ಮೇಲಿನ ಬಂಡವಾಳ ವೆಚ್ಚ<br>4216-01-700-2-20-386 ಕಟ್ಟಡಗಳ ನವೀಕರಣ | - |
| 1. | 4202 ಶಿಕ್ಷಣ ಕಲೆ ಮತ್ತು ಸಂಸ್ಕೃತಿ ಮೇಲಣ ಬಂಡವಾಳ<br>4202-01-202-1-01 ಸೆಕಂಡರಿ ಶಿಕ್ಷಣ | - |

**ಕೈಪಿಡಿ-12**

**ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಅದಕ್ಕೆ ಒದಗಿಸಲಾದ ಅನುದಾನ ಮತ್ತು ಫಲಾನುಭವಿಗಳ ವಿವರಗಳು**

ಸಹಾಯಧನ ನೀಡುವ ಕಾರ್ಯಕ್ರಮಗಳು ಇಲ್ಲ

**ಕೈಪಿಡಿ-13**

**ಇಲಾಖೆಯಲ್ಲಿ ನೀಡುತ್ತಿರುವ ಪರ್ಮಿಟ್ ಅಥವಾ ಅಧಿಕಾರ ಪತ್ರಗಳ ವಿವರ ಮತ್ತು ರಿಯಾಯತಿ ಪಡೆಯುವವರ ವಿವರ**

ಸಹಾಯಕ ಕಾರ್ಯನಿರ್ವಾಕ ಇಂಜನೀಯರರು ಲೋಇ ಉಪ ವಿಭಾಗ ರೋಣ ವ್ಯಾಪ್ತಿಯಲ್ಲಿ ಯಾವುದೇ ಪರ್ಮಿಟ್ ಅಥವಾ ಅಧಿಕಾರ ಪತ್ರಗಳನ್ನು ನೀಡುತ್ತಿಲ್ಲ.

**ಕೈಪಿಡಿ-14**

**ಇಲಾಖೆಯಲ್ಲಿರುವ ಮಾಹಿತಿಯನ್ನು ವೆಬ್‌ಸೈಟ್‌ನಲ್ಲಿ ನೀಡಿರುವ ಬಗ್ಗೆ ವಿವರ**

ಇಲಾಖೆಯಲ್ಲಿ ವೆಬ್‌ಸೈಟ್ ಯಾವುದೂ ಇಲ್ಲ.

**ಕೈಪಿಡಿ-15**

**ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಲಭ್ಯವಿರುವ ಸವಲತ್ತುಗಳು ಹಾಗೂ ಗ್ರಂಥಾಲಯ ಅಥವಾ ವಾಚನಾಲಯಗಳು ಇದ್ದಲ್ಲಿ ಅದರ ವಿವರ**

ಸಾರ್ವಜನಿಕರು ಸಹಾಯಕ ಕಾರ್ಯನಿರ್ವಾಹಕ ಇಂಜನಿಯರರು ಲೋ.ಇ. ಉಪ ವಿಭಾಗ ನರಗುಂದ ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಜೆ.ಆರ್. ಐವಳ್ಳಿ, ಸಹಾಯಕ ಇಂಜನೀಯರ ಇವರಿಗೆ ಅರ್ಜಿ ನೀಡುವುದು ಅಥವಾ ಸಂಪರ್ಕಿಸುವುದು.

ಕಛೇರಿಯ ಸಮಯದಲ್ಲಿ ವೇಳೆಯಲ್ಲಿ ಮೇಲ್ಕಂಡ ಅಧಿಕಾರಿಗಳ ದೂರವಾಣಿ ಸಂಖ್ಯೆ: 958377:261049.

ಸಾರ್ವಜನಿಕರಿಗೆ ಬಳಕೆಗೆ ವಾಚನಾಲಯ ಲಭ್ಯವಿರುವುದಿಲ್ಲ.

**ಕೈಪಿಡಿ-16**

**ಇಲಾಖೆಯಲ್ಲಿರುವ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ ಮತ್ತು ವಿವರಗಳು, ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು ಪದನಾಮ**

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು ಲೋ.ಇ. ಉಪ ವಿಭಾಗ ನರಗುಂದ ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಜೆ.ಆರ್. ಐವಳ್ಳಿ, ಸಹಾಯಕ ಇಂಜನೀಯರು ಇವರಿಗೆ ಅರ್ಜಿ ನೀಡುವುದು ಅಥವಾ ಕಛೇರಿ ವೇಳೆಯಲ್ಲಿ ಸಂಪರ್ಕಿಸುವುದು.

| ಕ್ರ. ಸಂ. | ಕಛೇರಿ ಮತ್ತು ವಿಳಾಸ | ಸಾರ್ವಜನಿಕ ಮಾಹಿತಿ ನೀಡುವ ಅಧಿಕಾರಿ, ಸೆಕ್ಷನ್-5(1) | ಸಾರ್ವಜನಿಕ ಮಾಹಿತಿ ನೀಡುವ ಸಹಾಯಕ ಅಧಿಕಾರಿ ಸೆಕ್ಷನ್-5(2) | ಮೇಲ್ಮನವಿ ಪ್ರಾಧಿಕಾರ ಅಧಿಕಾರಿಗಳು, ಸೆಕ್ಷನ್-19(1) |
|---|---|---|---|---|
| 1. | ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು ಲೋಕೋಪಯೋಗಿ ಇಲಾಖೆ ಉಪವಿಭಾಗ, ನಂ.6, ನರಗುಂದ. | ಸಹಾಯಕ ಇಂಜನೀಯರ-1 ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು ಲೋಕೋಪಯೋಗಿ ಇಲಾಖೆ ಉಪ ವಿಭಾಗ ನಂ.6 ಕಛೇರಿ, ನರಗುಂದ. | ಪ್ರ.ದ.ಸ. ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು ಲೋಕೋಪಯೋಗಿ ಇಲಾಖೆ ಉಪ ವಿಭಾಗ, ನಂ.6, ಕಛೇರಿ, ನರಗುಂದ. | ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು ಲೋಕೋಪಯೋಗಿ ಇಲಾಖೆ ಉಪ ವಿಭಾಗ, ನಂ.6, ನರಗುಂದ. |

**ಕೈಪಿಡಿ-17**

**ಇತರೆ ವಿವರಗಳು**

ಏನೂ ಇರುವುದಿಲ್ಲ.

ಮಾಹಿತಿಯನ್ನು ನಿಯಮಗಳಡಿ ಪರಿಶೀಲಿಸಿ ವರದಿಯನ್ನು ತಯಾರಿಸಿ ಸಲ್ಲಿಸಲಾಗಿದೆ.

**ಜಿ.ಆರ್. ಸೋಮನಗೌಡರ**

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು,

ಪಿ.ಆರ್.71 ಲೋಕೋಪಯೋಗಿ ಇಲಾಖೆ ಉಪವಿಭಾಗ, ನಂ.6, ನರಗುಂದ.

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ:** ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ನಂದಿಹಳ್ಳಿ ಗ್ರಾಮದಲ್ಲಿ ಪಿಂಕ್‌ಪಾರ್ಪರಿ ಗ್ರಾನೈಟ್‌ಗಾಗಿ ಮೆ: ಅಭಿನಯ್ ಟ್ರೇಡಿಂಗ್ ಕಾರ್ಪೋರೇಷನ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 625 ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:** 1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ: ಡಿಸಿಬಿ: ಕಗಗು 625:2005-06:6534 ದಿನಾಂಕ:07.02.2006

2. ತುಮಕೂರು ರವರ ಪತ್ರ ಸಂಖ್ಯೆ: ಗಭೂಇ: ಉನಿತು: ಡಿಸಿಬಿ: ಕಗಗು: 625: 2006-07:4604 ದಿನಾಂಕ:19.10.2006.

**ಪ್ರಸ್ತಾವನೆ:**

ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ನಂದಿಹಳ್ಳಿ ಗ್ರಾಮದ ಸರ್ವೆ ನಂ.42 ರಲ್ಲಿ ಮೆ: ಅಭಿನಯ್ ಟ್ರೇಡಿಂಗ್ ಕಾರ್ಪೋರೇಷನ್ ರವರಿಗೆ 0.22 ಎಕರೆಗೆ ದಿನಾಂಕ:29.01.2004 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರಗಳಂತೆ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2006ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.23,848/-ಗಳನ್ನು ಪಾವತಿಸುವಂತೆ ಹಾಗೂ ಗುತ್ತಿಗೆ ನಿಷ್ಕ್ರಿಯಗೊಳಿಸಿರುವ ಕ್ರಮವನ್ನು ಏಕೆ ಜರುಗಿಸಲಾಗುವುದೆಂದು ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1)ರ ಉಲ್ಲಂಘನೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ**

**ಸಂಖ್ಯೆ: ಗಭೂಇ: ಡಿಸಿಬಿ: ಕಗಗು: 625: 2006-07/ 11990, ದಿನಾಂಕ:11ನೇ ಜನವರಿ, 2007**

ಸರ್ಕಾರದ ಅಧಿಸೂಚನೆ-III ಸಂಖ್ಯೆ ಸಿಐ 418 ಎಂಆರ್‌ಸಿ 92 ದಿನಾಂಕ:02.07.1994ರಲ್ಲಿ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರವನ್ನು ಬಳಸಿ ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕಿನ, ನಂದಿಹಳ್ಳಿ ಗ್ರಾಮದ ಸರ್ವೆ ನಂ.42ರಲ್ಲಿ 0.22 ಎಕರೆಗೆ ಪಿಂಕ್ ಪಾರ್ಪರಿ ಗ್ರಾನೈಟ್‌ಗಾಗಿ ಮೆ: ಅಬಿನಯ್ ಟ್ರೇಡಿಂಗ್ ಕಾರ್ಪೋರೇಷನ್ ರವರ ಹೆಸರಿನಲ್ಲಿನ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 625ನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್.73 ನಿರ್ದೇಶಕರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು, ತುಮಕೂರು ಉಪವಿಭಾಗ, ತುಮಕೂರು ಇವರ ನಡವಳಿಕೆಗಳು

**ವಿಷಯ:** ಶ್ರೀ ಕರಿರಂಗಯ್ಯ ಬಿನ್ ಓಬಯ್ಯ, ಲಿಂಗನಹಳ್ಳಿ, ತುಮಕೂರು ತಾಲ್ಲೂಕು ಇವರ ಸ್ಥಿರಾಸ್ತಿಯನ್ನು ತುಮಕೂರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ, ತುಮಕೂರು ಇವರ ಹೆಸರಿಗೆ ವರ್ಗಾವಣೆಗೊಂಡಿರುವ ಆಸ್ತಿಯನ್ನು ಶ್ರೀ ಕರಿರಂಗಯ್ಯ ಇವರಿಗೆ ಪುನರ್ ವರ್ಗಾಯಿಸುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ಆದೇಶ ಸಂಖ್ಯೆ:ಎಆರ್‌ಟಿ/ ಎ.ಬಿ.ಎನ್./ ಸಿ.ಆರ್./884/ 2001-02 ದಿನಾಂಕ:13.02.2002.

2. ವ್ಯವಸ್ಥಾಪಕರು, ತುಮಕೂರು ತಾಲ್ಲೂಕು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರ ಪತ್ರ ಕ್ರ.ಸಂ. 165/ 2006-07 ದಿನಾಂಕ:01.08.2006.

**ಪ್ರಸ್ತಾವನೆ:**

ಶ್ರೀ ಕರಿರಂಗಯ್ಯ ಬಿನ್ ಓಬಯ್ಯ, ಲಿಂಗನಹಳ್ಳಿ, ತುಮಕೂರು ತಾಲ್ಲೂಕು ಇವರು ತುಮಕೂರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ. ತುಮಕೂರು ಈ ಬ್ಯಾಂಕಿನಲ್ಲಿ ಸಾಲ ಪಡೆದು ಸುಸ್ತಿದಾರರಾಗಿರುವುದರಿಂದ ಇವರಿಂದ ಬರಬೇಕಾದ ಅಸಲು, ಬಡ್ಡಿ, ಇತರೆ ಖರ್ಚು ಒಟ್ಟು ರೂ.24,500-00 ಗಳಿಗೆ ವಸೂಲಾತಿ ಡಿಕ್ರಿ ಆದೇಶ ಪಡೆದು ಅಮಲ್ಜಾರಿ ಸಂಖ್ಯೆ: 645/ 88-89 ರೀತ್ಯಾ ಅಮಲ್ಜಾರಿ ಪಡೆಯಲಾಗಿದ್ದರ ಮೇರೆಗೆ ದಿನಾಂಕ:18.01.2001ರಂದು ಬ್ಯಾಂಕಿನ ಮಾರಾಟಾಧಿಕಾರಿಗಳು ಬಹಿರಂಗವಾಗಿ ಇವರು ಆಧಾರ ಮಾಡಿಕೊಟ್ಟಿರುವ ಸ್ಥಿರಾಸ್ತಿಗಳನ್ನು ಹರಾಜು ನಡೆಸಿ, ಹರಾಜಿನಲ್ಲಿ ಯಾರು ಬಿಡ್ಡುದಾರರು ಬಾರದೇ ಇದ್ದುದರಿಂದ ಮಾರಾಟಾಧಿಕಾರಿಗಳ ನಡವಳಿಕೆ ಮೇರೆಗೆ ಉಲ್ಲೇಖ (1)ರ ಆದೇಶದಲ್ಲಿ ಇವರ ಸ್ಥಿರಾಸ್ತಿಗಳನ್ನು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ. ತುಮಕೂರು ಇವರ ಹೆಸರಿಗೆ ವರ್ಗಾಯಿಸಿ ಆದೇಶ ನೀಡಲಾಗಿತ್ತು.

ತರುವಾಯ ಸದರಿ ಬ್ಯಾಂಕಿನ ವ್ಯವಸ್ಥಾಪಕರು ದಿನಾಂಕ:01.08.2006ರಂದು ಉಲ್ಲೇಖ ಪತ್ರ (2) ರಲ್ಲಿ ಸದರಿ ಸಾಲಗಾರರು ದಿನಾಂಕ:27.06.2005 ರಂದು ರಸೀತಿ ಸಂಖ್ಯೆ: 3244ರ ಪ್ರಕಾರ ಸದರಿ ಬ್ಯಾಂಕಿಗೆ ಬಾಕಿಯಿರುವ ಸಾಲದ ಮೊತ್ತವನ್ನು ಪಾವತಿಸಿರುವುದಾಗಿ ವ್ಯವಸ್ಥಾಪಕರು ದಿನಾಂಕ:01.08.2006ರಂದು ಸದರಿಯವರಿಗೆ ಸಾಲ ತೀರುವಳಿ ದೃಢೀಕರಣ ಪತ್ರ ನೀಡಲಾಗಿದೆ. ಹಾಗೂ ಬ್ಯಾಂಕಿನ ಆಡಳಿತ ಮಂಡಳಿ ಸಭೆ ದಿನಾಂಕ:26.07.2006ರಂದು ನಡೆದ ಸಭೆಯ ನಡವಳಿಕೆಯಲ್ಲಿ, ಸದರಿ ಪೂರ ಸಾಲ ತೀರುವಳಿ ಮಾಡಿರುವ ಹಿನ್ನೆಲೆಯಲ್ಲಿ ಶ್ರೀ ಕರಿರಂಗಯ್ಯ ಬಿನ್ ಓಬಯ್ಯ, ಲಿಂಗನಹಳ್ಳಿ, ತುಮಕೂರು ತಾಲ್ಲೂಕು ಇವರ ಹೆಸರಿಗೆ ವರ್ಗಾವಣೆ ಮಾಡಲು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಸದರಿಯವರ ಹೆಸರಿಗೆ ವರ್ಗಾಯಿಸುವಂತೆ ಮನವಿಯನ್ನು ಮಾಡಿಕೊಂಡಿರುತ್ತಾರೆ.

ಸದರಿಯವರ ಮನವಿಯನ್ನು ಒಪ್ಪಿ ಉಲ್ಲೇಖ (1)ರಲ್ಲಿ ದಿನಾಂಕ:13.02.2002ರಂದು ಹೊರಡಿಸಿದ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡಂತೆ ಪುನರ್ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರಮಸಂಖ್ಯೆ: ಎ.ಆರ್.ಟಿ/ ಎ.ಬಿ.ಎಸ್/ ಸಿ.ಆರ್/ 884/ 2001-02, ದಿನಾಂಕ:29ನೇ ನವೆಂಬರ್, 2006**

ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಗಮನಿಸಿ ಶ್ರೀ ಬಿ.ಜಯಣ್ಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಿ ಅಧಿಕಾರಿಗಳು, ತುಮಕೂರು ಉಪವಿಭಾಗ ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ನಿಯಮ 38(ಎ) 15 ರನ್ವಯ ಹಾಗೂ ಕರ್ನಾಟಕ ಸಹಕಾರ ಅಧಿಸೂಚನೆ ಸಂಖ್ಯೆ: ಸಿ.ಎಂ.ಡಬ್ಲ್ಯೂ/69/ ಸಿಸಿಎಂ./ 2001 ದಿನಾಂಕ:21.11.2001ರ ರೀತ್ಯಾ ಪ್ರಯೋಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸಿ, ಶ್ರೀ ಕರಿರಂಗಯ್ಯ ಬಿನ್ ಓಬಯ್ಯ, ಲಿಂಗನಹಳ್ಳಿ ಗ್ರಾಮದ ಸರ್ವೆ ನಂ.47ಎ ವಿಸ್ತೀರ್ಣ 2.20 ಖುಷ್ಕಿ ಜಮೀನು ಇರುವ ಸ್ಥಿರಾಸ್ತಿಯನ್ನು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಿ ನೀಡಿದ್ದ ಉಲ್ಲೇಖ (1) ಆದೇಶವನ್ನು ಹಿಂತೆಗೆದುಕೊಂಡು ಸದರಿ ಸ್ಥಿರಾಸ್ತಿಯನ್ನು ಶ್ರೀ ಕರಿರಂಗಯ್ಯ ಬಿನ್ ಓಬಯ್ಯ ಲಿಂಗನಹಳ್ಳಿ, ತುಮಕೂರು ತಾಲ್ಲೂಕು ಇವರ ಹೆಸರಿಗೆ ನಿಲ್ಲಿಸಿ, ಪುನರ್ ವರ್ಗಾವಣೆ ಮಾಡಿ ಆದೇಶ ನೀಡಿರುತ್ತೇನೆ.

ಈ ಆದೇಶಕ್ಕೆ ಸಹಕಾರ ಸಂಘಗಳ ಕಾಯಿದೆ ಅನ್ವಯ ನಮೂನೆ 8ರ ನಿಗದಿತ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ಪತ್ರವನ್ನು ಅಲಾಯಿದೆ ಲಗತ್ತಿಸಿದೆ.

ಈ ಕಛೇರಿಯ ಮೊಹರು ಹಾಗೂ ನನ್ನ ಸ್ವಹಸ್ತಾಕ್ಷರದೊಂದಿಗೆ ದಿನಾಂಕ:29.11.2006ರಂದು ಪುನರ್ ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,

ತುಮಕೂರು ಉಪವಿಭಾಗ, ತುಮಕೂರು.

**ನಮೂನೆ-VIII**

**ಕರ್ನಾಟಕ ಸಹಕಾರ ಸಂಘಗಳ ನಿಯಮ 1960/ 38(ಎ) ರೀತ್ಯಾ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101ರ ಅನ್ವಯ ಪರಬಾರೆ ಬಗ್ಗೆ ಪ್ರಮಾಣ ಪತ್ರ**

**ಸ್ಥಿರ ಸ್ವತ್ತುಗಳ ವರ್ಗಾವಣೆ ಪ್ರಮಾಣ ಪತ್ರ**

ತುಮಕೂರು ಜಿಲ್ಲೆ ತುಮಕೂರು ತಾಲ್ಲೂಕು, ಲಿಂಗನಹಳ್ಳಿ ಗ್ರಾಮದ, ಶ್ರೀ ಕರಿರಂಗಯ್ಯ ಬಿನ್ ಓಬಯ್ಯ ಇವರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 71ರ ಅನ್ವಯ ಆದೇಶವನ್ನು ಜಾರಿಮಾಡಿದ್ದರಿಂದ ಸದರಿಯವರ ಸ್ಥಿರ ಸ್ವತ್ತುಗಳನ್ನು ದಿನಾಂಕ:13.02.2002 ರಂದು ಈ ಕಛೇರಿ ಆದೇಶದ ಅಡಿಯಲ್ಲಿ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರಿಗೆ ವರ್ಗಾಯಿಸಿದ್ದು, ಸದರಿ ಸಾಲಗಾರರಿಂದ ಬ್ಯಾಂಕಿಗೆ ಬರಬೇಕಾಗಿದ್ದ ಪೂರ ಹಣ ಸಂದಾಯವಾಗಿದ್ದು, ಸದರಿ ಸ್ಥಿರಾಸ್ತಿಗಳನ್ನು ಮೂಲ ಹಕ್ಕುದಾರರಿಗೆ ಪುನರ್ ವರ್ಗಾಯಿಸುವಂತೆ ಬ್ಯಾಂಕಿನ ಕೋರಿಕೆ ಮೇರೆಗೆ ಈ ಕೆಳಕಂಡ ಸ್ಥಿರಾಸ್ತಿಗಳ ಹಕ್ಕು ಅಧಿಕಾರ, ನಾಮ ಮತ್ತು ಬಾಧ್ಯತೆ ಶ್ರೀ ಕರಿರಂಗಯ್ಯ ಬಿನ್ ಓಬಯ್ಯ, ಲಿಂಗನಹಳ್ಳಿ, ತುಮಕೂರು ತಾಲ್ಲೂಕು ಇವರಿಗೆ ನಿರ್ದಿಷ್ಟವಾಗಿರತಕ್ಕದ್ದು ಮತ್ತು ಈ ಆದೇಶ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಾವಳಿಗೆ ಒಳಪಟ್ಟು ಸ್ಥಿರಾಸ್ತಿಯನ್ನು ಮೂಲ ಹಕ್ಕುದಾರರಿಗೆ ಒಪ್ಪಿಸತಕ್ಕದ್ದೆಂದು ಅಧಿನಿಯಮ 101ಬಿ ಪ್ರಕರಣದ ಅನ್ವಯ ಈ ಮೇಲಿನ ಆದೇಶ ನೀಡಲಾಗಿದೆ.

**ಸ್ವತ್ತುಗಳ ವಿವರ**

| ಗ್ರಾಮ | ಸರ್ವೆ ನಂ. | ವಿಸ್ತೀರ್ಣ | ತರಹೆ | ಹಕ್ಕುದಾರರ ವಿಳಾಸ |
|---|---|---|---|---|
| ನಾಗೇನಹಳ್ಳಿ | 47/A | 2.20 | ಖುಷ್ಕಿ | ಕರಿರಂಗಯ್ಯ ಬಿನ್ ಓಬಯ್ಯ |

**ಷರತ್ತು ಮತ್ತು ನಿಯಮಗಳು**

1) ಶ್ರೀ ಕರಿರಂಗಯ್ಯ ಬಿನ್ ಓಬಯ್ಯ, ಲಿಂಗನಹಳ್ಳಿ, ತುಮಕೂರು ತಾಲ್ಲೂಕು ವರ್ಗಾವಣೆ ಮಾಡಿದ ಸ್ವತ್ತುಗಳನ್ನು ಇವರೇ ಉಪಯೋಗಿಸತಕ್ಕದ್ದು.

2) ಪುನಃ ಮಾರಾಟ ಮಾಡುವ ಹಕ್ಕು ಇವರು ಹೊಂದಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,

ಪಿ.ಆರ್.74

ತುಮಕೂರು ಉಪವಿಭಾಗ, ತುಮಕೂರು.

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಇ.ಐ.ಬಿ. ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು ಇವರ ನ್ಯಾಯಾಲಯದ ನಡವಳಿ**

**ಕ್ರೈಂ.ಸಂ.81/02-03, ದಿನಾಂಕ:07/8ನೇ ಜೂನ್, 2002**

**ಉಪಸ್ಥಿತರು:** ಬಿ.ಜಿ. ವಿಜಯೇಂದ್ರ,

ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ಪ್ರತಿವಾದಿ** |
|---|---|
| ಆರಕ್ಷಕ ಉಪನಿರೀಕ್ಷಕರು, | ಮಣಿ (ಲಾರಿ ಚಲಕ) |
| ಚಾಮರಾಜನಗರ ಗ್ರಾಮಾಂತರ ಪೊಲೀಸ್ ಠಾಣೆ, | ಮಹಿಯುದ್ದೀನ್ (ಕ್ಲೀನರ್) |
| ಚಾಮರಾಜನಗರ. | |

**ಪ್ರಸ್ತಾವನೆ:**

ದಿನಾಂಕ:07/08/06.2002 ರಂದು ರಾತ್ರಿ 1.00 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೊಲೀಸ್ ಠಾಣೆ, ಚಾಮರಾಜನಗರ ಇವರಿಗೆ ದೊರೆತ ಖಚಿತ ವರ್ತಮಾನದ ಮೇರೆಗೆ ಚಾಮರಾಜನಗರ ತಾಲ್ಲೂಕಿನ ಪುಣಜನೂರು ತನಿಖಾ ಠಾಣೆಯ ಮುಂದೆ ಸಿಬ್ಬಂದಿ ಹಾಗೂ ಪಂಚರ ಜೊತೆ ರಸ್ತೆ ಕಾವಲು ಮಾಡುತ್ತಿದ್ದಾಗ ಅನುಮಾನಾಸ್ಪದವಾಗಿ ಬಂದ ಲಾರಿ ಸಂಖ್ಯೆ: ಟಿಎಜಿ-9988ನ್ನು ನಿಲ್ಲಿಸಿ ತಪಾಸಣೆ ಮಾಡಿದಾಗ ಸದರಿ ಲಾರಿಯಲ್ಲಿ ಖಾಲಿ ಬಾಟಲ್‌ಗಳ ಚೀಲಗಳಡಿಯಲ್ಲಿ ಸುಮಾರು 4200 ಲೀಟರ್ ಮದ್ಯಸಾರವನ್ನು 35 ಲೀಟರ್ ಸಾಮರ್ಥ್ಯದ 120 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಯಾವುದೇ ರಹದಾರಿ ಪತ್ರಗಳಿಲ್ಲದೇ ಅಕ್ರಮವಾಗಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಮೇರೆಗೆ ವಾಹನ ಮತ್ತು 4200 ಲೀಟರ್ ಮದ್ಯಸಾರ ಹಾಗೂ ಇತರೆ ಮುದ್ದೆಮಾಲುಗಳನ್ನು ವಶಪಡಿಸಿಕೊಂಡು, ಪ್ರಕರಣ ಸಂಖ್ಯೆ 81/2002-03 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ರೀತ್ಯಾ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಮುಂದಿನ ಕ್ರಮಕ್ಕಾಗಿ ಅಬಕಾರಿ ನಿರೀಕ್ಷಕರು, ಚಾಮರಾಜನಗರ ವಲಯ, ಚಾಮರಾಜನಗರ ಇವರಿಗೆ ಹಸ್ತಾಂತರಿಸಿರುತ್ತಾರೆ. ಈ ಮೊಕದ್ದಮೆಯಲ್ಲಿನ ಆರೋಪಿಗಳು ತಲೆ ತಪ್ಪಿಸಿಕೊಂಡಿರುತ್ತಾರೆ.

ಈ ಪ್ರಕರಣದಲ್ಲಿ ಜಪ್ತುಪಡಿಸಲಾದ ಮದ್ಯಸಾರವನ್ನು ಫ್ಲೇವರ್ಸ್ ಅಂಡ್ ಎಸೆನ್ಸ್ ಪ್ರೈ.ಲಿ., ಹುಣಸೂರು ರಸ್ತೆ, ಇವರಿಗೆ ದಿನಾಂಕ:31.03.2003ರ ಆದೇಶದಲ್ಲಿ ಹಂಚಿಕೆ ಮಾಡಿ, ಅದಕ್ಕೆ ತಗಲುವ ಮೌಲ್ಯ ರೂ.1,88,767/- ಚಲನ್ ನಂ.259, ದಿನಾಂಕ:31.03.2003ರಲ್ಲಿ ಪಾವತಿಸಿರುವ ಮೊತ್ತದಲ್ಲಿ ಅಡಕಗೊಂಡಿರುತ್ತದೆ.

ಲಾರಿ ಸಂಖ್ಯೆ: ಟಿಎಜಿ-9988ರ ಮಾಲೀಕರಾದ ಅಬ್ದುಲ್ ನಜೀರ್‌ರವರಿಗೆ ಫೈನಾನ್ಸ್ ನೀಡಿದ ಶ್ರೀಮತಿ ಗವಾರ ದೇವಿಯವರ ಅಧಿಕಾರ ಪತ್ರ ಹೊಂದಿದ ಶ್ರೀ ಮಹೇಂದರ್ ಜೈನ್ ಬಿನ್ ಬಾಬುಲಾಲ್ ಜೈನ್ ಅವರು ವಕೀಲರಾದ ಶ್ರೀ ಎಂ. ಚಿನ್ನಸ್ವಾಮಿಯವರ ಮೂಲಕ ದಿನಾಂಕ:28.10.2002 ರಂದು ವಕಾಲತ್ತನ್ನು ಸಲ್ಲಿಸಿ, ಮೇಲ್ಕಂಡ ವಾಹನವನ್ನು ಈ ಪ್ರಾಧಿಕಾರ ವಿಧಿಸಿದ ಷರತ್ತುಗಳ ಮೇಲೆ ಜಾಮೀನಿನ ಸೆಕ್ಯುರಿಟಿ ಹಾಗೂ ವಾಹನದ ಮೂಲ ಆರ್.ಸಿ. ಪುಸ್ತಕವನ್ನು ವಾಹನದ ಭದ್ರತೆಗಾಗಿ ಈ ಪ್ರಾಧಿಕಾರಕ್ಕೆ ನೀಡುತ್ತೇವೆಂದು ತಿಳಿಸಿ, ವಾಹನವನ್ನು ಅದರ ಮಾಲೀಕರ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿಕೊಡಲು ಮನವಿ ಮಾಡಿರುತ್ತಾರೆ.

ಈ ಮೊಕದ್ದಮೆಯಲ್ಲಿ ವಶಪಡಿಸಿಕೊಳ್ಳಲಾದ ಲಾರಿ ಸಂಖ್ಯೆ: ಟಿಎಜಿ-9988ರ ಈಗಿನ ಮಾರುಕಟ್ಟೆ ಮೌಲ್ಯವನ್ನು ನಿರ್ಧರಿಸಿಕೊಡುವಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಇವರಿಗೆ ದಿನಾಂಕ:20.08.2003 ರಂದು ಪತ್ರ ಬರೆದು ಕೋರಲಾಗಿ ಸದರಿ ಅಧಿಕಾರಿಗಳು, ಮೇಲ್ಕಂಡ ವಾಹನವನ್ನು ಪರಿಶೀಲಿಸಿ, ದಿನಾಂಕ:15.09.2003 ರಂದು ಮೌಲ್ಯ ನಿರ್ಧರಿಸಿದ ವರದಿಯನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಸದರಿ ವರದಿಯನ್ನು ಪರಿಶೀಲಿಸಿದಾಗ ಮೇಲ್ಕಂಡ ಲಾರಿ ಸಂಖ್ಯೆ: ಟಿಎಜಿ-9988ರ ಈಗಿನ ಮಾರುಕಟ್ಟೆ ಮೌಲ್ಯ ರೂ.1,80,000/- ಎಂದು ನಿಗದಿಪಡಿಸಿರುತ್ತಾರೆ.

ಮೇಲ್ಕಂಡ ವಾಹನದ ಮಾಲೀಕರಾದ ಶ್ರೀ ಅಬ್ದುಲ್ ನಜೀರ್‌ರವರಿಗೆ ಫೈನಾನ್ಸ್ ನೀಡಿದ ಹಾಗೂ ಅರ್ಜಿದಾರರ ಅಧಿಕಾರ ಪತ್ರ ಹೊಂದಿದ ಶ್ರೀ ಮಹೇಂದ್ರ ಜೈನ್ ಬಿನ್ ಬಾಬುಲಾಲ್ ಜೈನ್ ಇವರ ಪರವಾಗಿ ಅವರ ವಕೀಲರಾದ ಶ್ರೀ ಎಂ. ಚಿನ್ನಸ್ವಾಮಿಯವರಿಗೆ ಈ ಪ್ರಾಧಿಕಾರವು ದಿನಾಂಕ:09.10.2003 ರಂದು ಒಂದು ತಿಳವಳಿಕೆ ಪತ್ರವನ್ನು ನೀಡಿದ್ದು, ಸದರಿ ಪತ್ರದಲ್ಲಿ ವಕೀಲರು ಕೋರಿದಂತೆ ಮೇಲ್ಕಂಡ ವಾಹನವನ್ನು ಅರ್ಜಿದಾರರ ವಶಕ್ಕೆ ಮಧ್ಯಂತರ ಬಿಡುಗಡೆಗೊಳಿಸಲು ವಾಹನಕ್ಕೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಇವರು ನಿಗದಿಪಡಿಸಿದ ವಾಹನದ ಈಗಿನ ಮಾರುಕಟ್ಟೆ ಮೌಲ್ಯ ರೂ.1,80,000/-ಕ್ಕೆ ಸಮನಾದ ಬ್ಯಾಂಕ್ ಗ್ಯಾರಂಟಿ ಅಥವಾ ಎನ್.ಎಸ್.ಸಿ.ಯನ್ನು ವಾಹನದ ಭದ್ರತೆಗಾಗಿ ಈ ಪ್ರಾಧಿಕಾರಕ್ಕೆ ನೀಡಿದರೆ ನಿಮ್ಮ ಮನವಿಯಂತೆ ವಾಹನವನ್ನು ಅರ್ಜಿದಾರರ ವಶಕ್ಕೆ ತಾತ್ಕಾಲಿಕ ಬಿಡುಗಡೆ ಮಾಡಲು ಆದೇಶಿಸಲಾಗುವುದೆಂದು ನಿರ್ದೇಶಿಸಿ, ಅವರು ನೀಡಿದ ವಿಳಾಸಕ್ಕೆ ಕಳುಹಿಸಿಕೊಡಲಾಗಿದ್ದು, ಸದರಿ ವಕೀಲರು ಈ ಪ್ರಾಧಿಕಾರ ಕೇಳಿದ ಬ್ಯಾಂಕ್ ಭದ್ರತೆ ಮತ್ತು ದಾಖಲಾತಿಗಳನ್ನು ಇದುವರೆವಿಗೂ ಹಾಜರುಪಡಿಸಿರುವುದಿಲ್ಲ.

ಈ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರಿಗೆ ಫೈನಾನ್ಸ್ ನೀಡಿದ ಅರ್ಜಿದಾರರು ವಾಹನವನ್ನು ಅವರ ವಶಕ್ಕೆ ಮಧ್ಯಂತರ ಬಿಡುಗಡೆ ಮಾಡಲು ಕೋರಿದ್ದು, ವಾಹನದ ಭದ್ರತೆಗಾಗಿ ಜಾಮೀನು ಸೆಕ್ಯುರಿಟಿ ಮತ್ತು ವಾಹನದ ಮೂಲ ಆರ್.ಸಿ. ಪುಸ್ತಕವನ್ನು ಈ ಪ್ರಾಧಿಕಾರಕ್ಕೆ ನೀಡುವುದಾಗಿ ಕೋರಿರುವ ಕೋರಿಕೆಯು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿರುವುದಿಲ್ಲವೆಂದು ಅರ್ಜಿದಾರರ ಅರ್ಜಿಯನ್ನು ಈ ಪ್ರಾಧಿಕಾರದ ಆದೇಶದ ದಿನಾಂಕ:20.11.2004ರಲ್ಲಿ ತಿರಸ್ಕರಿಸಲಾಗಿದೆ.

ಈ ಪ್ರಕರಣದ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ಈ ಪ್ರಕರಣದಲ್ಲಿ ಜಪ್ತುಪಡಿಸಲಾದ ವಾಹನದ ಮಾಲೀಕರು ಅಬ್ದುಲ್ ನಜೀರ್‌ರವರಾಗಿದ್ದು, ಸದರಿ ವಾಹನಕ್ಕೆ ಶ್ರೀಮತಿ ಗವಾರದೇವಿಯರು ಫೈನಾನ್ಸ್ ನೀಡಿರುವುದಾಗಿ ಅವರ ಪರ ಶ್ರೀ ಮಹೇಂದ್ರ ಜೈನ್ ಇವರು ವಾಹನ ಮಧ್ಯಂತರ ವಶಕ್ಕೆ ಬಿಡುಗಡೆಗಾಗಿ ಕೋರಿರುತ್ತಾರೆ. ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 3 ವರ್ಷ 11 ತಿಂಗಳು ಕಳೆದಿರುತ್ತದೆ. ಅರ್ಜಿದಾರರ ಪರ ವಕೀಲರ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನಿಗದಿಪಡಿಸಿರುವ ಮೊತ್ತಕ್ಕೆ ಬ್ಯಾಂಕ್ ಭದ್ರತೆ ಮತ್ತು ವಾಹನದ ಮೂಲ ಆರ್.ಸಿ. ಪುಸ್ತಕವನ್ನು ಹಾಜರುಪಡಿಸಲು ತಿಳುವಳಿಕೆ ನೀಡಲಾಗಿದ್ದರೂ ಸಹ ಇದುವರೆವಿಗೂ ಯಾವುದೇ ಭದ್ರತೆಯಾಗಲೀ ಅಥವಾ ಆರ್.ಸಿ. ಪುಸ್ತಕವನ್ನು ಖುದ್ದಾಗಿ ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುವುದಿಲ್ಲ. ಅಲ್ಲದೇ ಈ ಪ್ರಕರಣದ ವಿಚಾರಣೆಗಾಗಿ 18.05.2006 ರಂದು ಹಾಜರಾಗುವಂತೆ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ಮಹೇಂದ್ರ ಜೈನ್ ಇವರಿಗೆ ಜಾರಿಯಾಗಿ ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ಸ್ವೀಕೃತವಾಗಿರುತ್ತದೆ. ಈ ಬಗ್ಗೆ ಸದರಿ ನೋಟೀಸಿಗೆ ಯಾವುದೇ ಅನುಸರಣೆ ಸಲ್ಲಿಸಿರುವುದಿಲ್ಲ. ಇದನ್ನು ಗಮನಿಸಿದರೆ ವಾಹನ ಬಿಡುಗಡೆಗಾಗಲೀ ಹಾಗೂ ತನ್ನ ಅರ್ಜಿಯ ವಿಲೇಯ

ಬಗ್ಗೆಯಾಗಲೀ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ ಹಾಗೂ ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಂತೆಯೇ ಈ ಘಟನೆಯು ಸಂಭವಿಸಿದ ದಿನದಿಂದ ವಾಹನ ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ, ಏಜೆಂಟರ್ ಗಮನಕ್ಕೆ ಬಾರದೆ ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಈ ಪ್ರಾಧಿಕಾರವು ಪ್ರಕರಣವನ್ನು ಇನ್ನು ಹಾಗೆಯೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇಲ್ಲವೆಂದು ಮತ್ತು ವಾಹನವನ್ನು ಹೀಗೆಯೇ ಬಿಟ್ಟಲ್ಲಿ ಮಳೆ, ಗಾಳಿ ಮತ್ತು ಬಿಸಿಲಿನ ವಾತಾವರಣದ ವೈಪರೀತ್ಯಕ್ಕೆ ಸಿಲುಕಿ ಬಿಡಿಭಾಗಗಳು ಹಾಳಾಗಿ ತನ್ನ ಮೌಲ್ಯವನ್ನು ಕಳೆದುಕೊಳ್ಳುವ ಸಾಧ್ಯತೆ ಇರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸಂಖ್ಯೆ: ಡಿಟಿಸಿಆರ್/ 132/ 2002-03, ದಿನಾಂಕ:18ನೇ ನವೆಂಬರ್, 2006**

ಬಿ.ಜಿ. ವಿಜಯೇಂದ್ರ, ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಇ.ಐ.ಬಿ. ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು ಆದ ನಾನು ಕರ್ನಾಟಕ ಅಬ್ಕಾರಿ ಕಾಯಿದೆ 1965 ಕಲಂ 43(ಬಿ)ರ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿ, ಕಲಂ 43(ಎ)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಈ ಪ್ರಕರಣದಲ್ಲಿ ಜಪ್ತು ಪಡಿಸಲಾದ ಟಿಎಜಿ-9988 ನೋಂದಣಿ ಸಂಖ್ಯೆಯ ಲಾರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

(ಈ ಆದೇಶವನ್ನು ಇಂದು ಅಂದರೆ 2006ನೇ ನವೆಂಬರ್ 18ನೇ ತಾರೀಖಿನಂದು ವಿಷಯ ನಿರ್ವಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

**ಬಿ.ಜಿ. ವಿಜಯೇಂದ್ರ**
ಅಬಕಾರಿ ಅಧೀಕ್ಷಕರು ಹಾಗೂ
ಅಧಿಕೃತ ಅಧಿಕಾರಿಗಳು, ಇ.ಐ.ಬಿ.,
ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು.

ಪಿ.ಆರ್.77

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರ ನಡವಳಿ**

**ಉಪಸ್ಥಿತರು:** ಜಿ. ಜಯರಾಮಯ್ಯ, ಭಾ.ಅ.ಸೇ., ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ.

**ವಿಷಯ:** ಶ್ರೀ,ಎಸ್.ವಿ.ಲೋಕಪ್ಪ, ವನಪಾಲಕ (ಆಗಿನ ಅರಣ್ಯರಕ್ಷಕ) ಆಗಿನ ಆನವಟ್ಟಿ ವಲಯ, ಆನವಟ್ಟಿ, ಶಿವಮೊಗ್ಗ ಜಿಲ್ಲೆ ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿಯ ಕುರಿತು.

**ಉಲ್ಲೇಖ:**
1. ಸರ್ಕಾರದ ಪತ್ರ ಸಂಖ್ಯೆ:ಅಪಜೀ:25:ಅಇವಿ:2004 ದಿ:30–08–2006.
2. ಮಾನ್ಯ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಭವನ, ಬೆಂಗಳೂರು ಅವರ ಪತ್ರ ಕ್ರ:ಬಿ2:ಸಿಇವಿ:ಸಿಆರ್/48/02–03 ದಿನಾಂಕ:11–12–2006.
3. ಆರಕ್ಷಕ ಮಹಾ ನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಕ್ರಮಾಂಕ:ಲೋಕ/ಐಎನ್‌ವಿ(ಜಿ)/ಸಿಟಿಎಲ್/7/ಸಿಆರ್/1/2002 ಎಸ್‌ಹೆಚ್‌ಎಂ ದಿನಾಂಕ:21–11–2002 ಮತ್ತು 27–12–2002.
4. ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಕ್ರಮಾಂಕ: ಲೋಕ:INV(G)CTL-7:CR-1/2002: ಶಿವಮೊಗ್ಗ ದಿ:05–02–2004 ಮತ್ತು 16–12–2006.
5. ಶ್ರೀ ಎಸ್.ವಿ.ಲೋಕಪ್ಪ, ಆಪಾದಿತ ಸರ್ಕಾರಿ ನೌಕರನ ವಿರುದ್ಧ ಕರ್ನಾಟಕ ಲೋಕಾಯುಕ್ತ ಪೋಲೀಸ್ ಠಾಣೆ, ಶಿವಮೊಗ್ಗ ಗುನ್ನೆ ನಂ.01/2002ರಲ್ಲಿರುವ ತನಿಖಾ ದಾಖಲಾತಿಗಳ ನಕಲುಗಳು.
6. ಈ ಕಛೇರಿಯ ಆದೇಶದ ಕ್ರ:ಸಿಬ್ಬಂದಿ/ಲೋಕ/ಸಿಆರ್/76/02–03 ದಿ:01–02–2003 ಮತ್ತು 15–07–2003.

**ಪ್ರಸ್ತಾವನೆ:**

ಶ್ರೀ ಎಂ.ಬಿ.ಶಾಂತಕುಮಾರ್, ವಲಯಾರಣ್ಯಾಧಿಕಾರಿ ಆಗಿನ ಆನವಟ್ಟಿ ವಲಯ, ಆನವಟ್ಟಿ ಸೊರಬ ತಾಲ್ಲೂಕು ಮತ್ತು ಶ್ರೀ ಎಸ್.ವಿ.ಲೋಕಪ್ಪ, ವನಪಾಲಕ (ಆಗಿನ ಅರಣ್ಯ ರಕ್ಷಕ) ಆಗಿನ ವಲಯ ಅರಣ್ಯಾಧಿಕಾರಿಗಳ ಕಛೇರಿ, ಆನವಟ್ಟಿ ವಲಯ, ಆನವಟ್ಟಿ, ಸೊರಬ ತಾಲ್ಲೂಕು ಶಿವಮೊಗ್ಗ ಜಿಲ್ಲೆ ಇವರ ವಿರುದ್ಧ ಗುನ್ನೆ ಸಂಖ್ಯೆ:01/2002ರಲ್ಲಿ ಶಿವಮೊಗ್ಗ ಲೋಕಾಯುಕ್ತ ಪೋಲೀಸ್ ಠಾಣೆಯಲ್ಲಿ ದಾಖಲಾಗಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು ಮಾನ್ಯ ಆರಕ್ಷಕ ಮಹಾ ನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ:21–11–2002ರ ಮೂಲಕ ಕಳುಹಿಸುತ್ತಾ ಆಪಾದಿತರಾದ ಶ್ರೀ ಎಸ್.ವಿ.ಲೋಕಪ್ಪ, ವನಪಾಲಕ (ಆಗಿನ ಅರಣ್ಯ ರಕ್ಷಕ) ಆಗಿನ ಆನವಟ್ಟಿ ವಲಯ ಅರಣ್ಯಾಧಿಕಾರಿಗಳ ಕಛೇರಿ ಇವರನ್ನು ಘನ ನ್ಯಾಯಾಲಯದಲ್ಲಿ 1988ರ ಭ್ರಷ್ಟಾಚಾರ ನಿರೋಧ ಕಾಯ್ದೆಯ, ಕಲಂ,–19(1)(ಅ) ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಗಾಗಿ ಈ ಪ್ರಾಧಿಕಾರವನ್ನು ಕೋರಿರುತ್ತಾರೆ.

ಅಲ್ಲದೇ, ಆರಕ್ಷಕ ನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಪೋಲೀಸ್ ಠಾಣೆ, ಶಿವಮೊಗ್ಗ ಇವರು ಶ್ರೀ ಎಂ.ಬಿ.ಶಾಂತಕುಮಾರ್, ವಲಯ ಅರಣ್ಯಾಧಿಕಾರಿ, ಆಗಿನ ಆನವಟ್ಟಿ ವಲಯ, ಆನವಟ್ಟಿ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಶಿವಮೊಗ್ಗ ಕರ್ನಾಟಕ ಲೋಕಾಯುಕ್ತ ಆರಕ್ಷಕ ಠಾಣೆಯಲ್ಲಿ ಗುನ್ನೆ ಸಂಖ್ಯೆ: 1/2002ರಲ್ಲಿ 1988ರ ಭ್ರಷ್ಟಾಚಾರ ನಿರೋಧ ಕಾಯ್ದೆಯ, ಕಲಂ,–7, 13(1) ಜೊತೆಯಲ್ಲಿ ಓದಲಾದ ಕಲಂ–13(2)ರ ಅಡಿಯಲ್ಲಿ ದಾಖಲಿಸಿರುತ್ತಾರೆ. ಆಪಾದಿತರಾದ ಶ್ರೀ ಎಂ.ಬಿ.ಶಾಂತಕುಮಾರ್, ವಲಯಾರಣ್ಯಾಧಿಕಾರಿ ಆಗಿನ ಆನವಟ್ಟಿ ವಲಯ, ಆನವಟ್ಟಿ ಸೊರಬ ತಾಲ್ಲೂಕು

ಇವರು ಫಿರ್ಯಾದಿ ಶ್ರೀ ಜಿ.ಕಲವೀರಪ್ಪ ಬಿನ್ ಬಸಪ್ಪ, ಸಮನವಳ್ಳಿ, ಸೊರಬ ತಾಲ್ಲೂಕು, ಇವರು ತಮ್ಮ ಸೊಸೆ ಶ್ರೀಮತಿ ಶೈಲ ಇವರ ಪರವಾಗಿ ಆನವಟ್ಟಿ ಗ್ರಾಮದಲ್ಲಿ ಕಟ್ಟಿಸುತ್ತಿರುವ ಮನೆಗೆಂದು ತಯಾರಿಸಿರುವ ಐದು ಕಿಟಕಿಗಳನ್ನು ವಶಪಡಿಸಿಕೊಂಡಿದ್ದು, ಸದರಿ ಕಿಟಕಿಗಳನ್ನು ಫಿರ್ಯಾದುದಾರಿಗೆ ಹಿಂತಿರುಗಿಸಲು 1,000/-ರೂ.ಗಳ ಅಕ್ರಮ ಸಂಭಾವನೆಯನ್ನು ಫಿರ್ಯಾದಿಯಿಂದ ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ನೌಕರರ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವಂತೆ ಕರ್ನಾಟಕ ಲೋಕಾಯುಕ್ತ ಪೋಲೀಸರಿಗೆ ದೂರನ್ನು ಕೊಟ್ಟಿರುತ್ತಾರೆ.

ಮೇಲ್ಕಂಡ ದೂರನ್ನು ಆಧರಿಸಿ ಆರಕ್ಷಕ ನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಪೋಲೀಸ್ ಠಾಣೆ, ಶಿವಮೊಗ್ಗ ಇವರು ಶ್ರೀ ಎಂ.ಬಿ.ಶಾಂತಕುಮಾರ್, ವಲಯ ಅರಣ್ಯಾಧಿಕಾರಿ, ಆಗಿನ ಆನವಟ್ಟಿ ವಲಯ, ಆನವಟ್ಟಿ ಇವರ ವಿರುದ್ಧ ದಿನಾಂಕ:21-5-2002 ರಂದು ದಂಡಾರ್ಹ ಪ್ರಕರಣವನ್ನು ದಾಖಲಿಸಿ ಮುಂದಿನ ತನಿಖೆಯನ್ನು ಕೈಗೊಂಡಿರುತ್ತಾರೆ.

ಅದರಂತೆ ಟ್ರ್ಯಾಪ್ ಪೂರ್ವದ ಮಹಜರ್‌ನ ಎಲ್ಲಾ ಔಚಿತ್ಯಪೂರ್ಣ ಕ್ರಮಗಳನ್ನು ನೆರವೇರಿಸಿದ ನಂತರ ಆರಕ್ಷಕ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೋಲೀಸ್ ಠಾಣೆ, ಶಿವಮೊಗ್ಗ ಇವರು ದಿನಾಂಕ:22-5-2002ರಂದು ಆನವಟ್ಟಿ ವಲಯ ಅರಣ್ಯಾಧಿಕಾರಿಗಳ ಕಛೇರಿಯ ಕಾಂಪೌಂಡಿನ ಒಳಗಡೆ ಇರುವ ವಲಯ ಅರಣ್ಯಾಧಿಕಾರಿಗಳ ವಾಸದ ಮನೆಯ ಮುಂಭಾಗದಲ್ಲಿ ಬೀಸಿದ ಲಂಚದ ಬಲೆಯು ಯಶಸ್ವಿಯಾಗಿ ಶ್ರೀ ಎಂ.ಬಿ.ಶಾಂತಕುಮಾರ್, ವಲಯ ಅರಣ್ಯಾಧಿಕಾರಿ, ಆಗಿನ ಆನವಟ್ಟಿ ವಲಯ, ಆನವಟ್ಟಿ ಇವರ ಸೂಚನೆಯ ಮೇರೆಗೆ ಶ್ರೀ ಎಸ್.ವಿ.ಲೋಕಪ್ಪ, ವನಪಾಲಕ (ಆಗಿನ ಅರಣ್ಯ ರಕ್ಷಕ) ಇವರು ಅಕ್ರಮ ಸಂಭಾವನೆಯಾದ ರೂ.1,000/-ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಲಂಚದ ಹಣದೊಡನೆ ಸಿಕ್ಕಿಹಾಕಿಕೊಂಡಿದ್ದಾರೆ. ಅಪಾದಿತ ಸರ್ಕಾರಿ ನೌಕರ ಶ್ರೀ ಎಸ್.ವಿ.ಲೋಕಪ್ಪ, ವನಪಾಲಕ (ಆಗಿನ ಅರಣ್ಯ ರಕ್ಷಕ) ಇವರ ಎರಡೂ ಕೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಪ್ತಲೀಸ್ ಪರೀಕ್ಷೆಗೆ ಒಳಪಡಿಸಿದಾಗ ಅವು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ಶ್ರೀ ಬಿ, ಸೋಮಶೇಖರ ದ್ವಿ,ದ,ಸ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಯವರ ಕಛೇರಿ ಶಿವಮೊಗ್ಗ ಇವರು ಪ್ರತ್ಯಕ್ಷದರ್ಶಿಗಳಾಗಿಯೂ ಮತ್ತು ನೆರಳು ಸಾಕ್ಷಿಯಾಗಿಯೂ ಸಹ ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಪಿರ್ಯಾಧಿ ಹಾಗೂ ಆಪಾದಿತ ಸರ್ಕಾರಿ ನೌಕರರ ನಡುವಿನ ಸಂಭಾಷಣೆಯನ್ನು ಗಮನಿಸಿರುತ್ತಾರೆ ಮತ್ತು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 1,000/-ಗಳನ್ನು ಎಸ್.ವಿ.ಲೋಕಪ್ಪ, ವನಪಾಲಕ (ಆಗಿನ ಅರಣ್ಯ ರಕ್ಷಕ) ಇವರಿಂದ ಪಂಚರ ಸಮಕ್ಷಮದಲ್ಲಿ ವಶಪಡಿಸಿಕೊಳ್ಳಲಾಗಿದೆ. ಆದ್ದರಿಂದ ಆಪಾದಿತ ಸರ್ಕಾರಿ ನೌಕರರು 1988ರ ಭ್ರಷ್ಟಾಚಾರ ನಿರೋಧ ಕಾಯ್ದೆಯಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಮಾಡಿರುತ್ತಾರೆ. ಆದಕಾರಣ ಅವರು 1988ರ ಭ್ರಷ್ಟಾಚಾರ ನಿರೋಧ ಕಾಯ್ದೆಯ, ಕಲಂ-7, 13(1) ಜೊತೆಯಲ್ಲಿ ಓದಲಾದ ಕಲಂ-13(2)ರ ಪ್ರಕಾರ ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸ ತಕ್ಕವರಾಗಿರುತ್ತಾರೆ.

ಹಾಗಾಗಿ ಈ ಪ್ರಕರಣಕ್ಕೆ ಸಂಬಂಧಿಸಿದ ತನಿಖಾ ದಾಖಲಾತಿಗಳಾದ ಪ್ರಥಮ ವರ್ತಮಾನ ವರದಿ, ಟ್ರ್ಯಾಪ್ ಪೂರ್ವದ ಮಹಜರು ಮತ್ತು ಟ್ರ್ಯಾಪ್‌ನ ನಡವಳಿಗಳು, ಸಾಕ್ಷಿಗಳ ಹೇಳಿಕೆಗಳು, ರಾಸಾಯನಿಕ ಪರೀಕ್ಷಕರ ವರದಿ, ಟ್ರ್ಯಾಪ್ ಸ್ಥಳದ ನಕ್ಷೆಮತ್ತು ತನಿಖಾಧಿಕಾರಿಯವರ ಅಂತಿಮ ವರದಿಗಳು ಆಪಾದಿತ ಸರ್ಕಾರಿ ನೌಕರನ ವಿರುದ್ಧ ಇರುವ ಆಪಾದನೆಗಳನ್ನು ಸಮರ್ಥಿಸುವ ನಿರ್ಣಾಯಕ ಸಾಕ್ಷ್ಯಗಳಾಗಿದ್ದು, ಅವುಗಳ ಪರಿಶೀಲನೆಯು ಅವರ ವಿರುದ್ಧ ಪ್ರಕರಣದ ಅಸ್ತಿತ್ವವನ್ನು ಮೇಲುನೋಟಕ್ಕೆ ಸೂಚಿಸುತ್ತದೆ.

ಹಾಗೂ, ದಾಖಲಾತಿಗಳ ಸಾಕ್ಷ್ಯಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಆಪಾದಿತ ಸರ್ಕಾರಿ ನೌಕರನಾದ ಶ್ರೀ ಎಸ್.ವಿ.ಲೋಕಪ್ಪ, ವನಪಾಲಕ (ಆಗಿನ ಅರಣ್ಯ ರಕ್ಷಕ) ಆಗಿನ ವಲಯ ಅರಣ್ಯಾಧಿಕಾರಿಗಳ ಕಛೇರಿ, ಆನವಟ್ಟಿ ವಲಯ, ಆನವಟ್ಟಿ, ಶಿವಮೊಗ್ಗ ಜಿಲ್ಲೆ ಇವರು 1988ರ ಭ್ರಷ್ಟಾಚಾರ ನಿರೋಧ ಕಾಯ್ದೆಯಡಿಯಲ್ಲಿ ಶಿಕ್ಷಾರ್ಹವಾದ ಅಪರಾಧವನ್ನು ಎಸಗಿರುವುದು ಧೃಡಪಟ್ಟ ನಂತರ ಉಲ್ಲೇಖ(6)ರ ಆದೇಶ ದಿನಾಂಕ:01-12-2003ರಂದು ಈ ಪ್ರಕರಣದಲ್ಲಿ ಸದರಿ ನೌಕರರನ್ನು ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಯನ್ನು ನೀಡಲಾಗಿತ್ತು ಈ ಪ್ರಕರಣದಲ್ಲಿ ಕೆಲವು ತಾಂತ್ರಿಕ ಕಾರಣಗಳಿಂದ ಶ್ರೀ ಎಂ.ಬಿ.ಶಾಂತಕುಮಾರ್, ವಲಯ ಅರಣ್ಯಾಧಿಕಾರಿ, ಇವರನ್ನು ಅಭಿಯೋಜನೆಗೆ ಒಳಪಡಿಸಲು ಲೋಕಾಯುಕ್ತದ ಪೋಲಿಸ್ ಮಹಾನಿರೀಕ್ಷಕರ ಕೋರಿಕೆಯನ್ನು ಇಲಾಖಾ ಮುಖ್ಯಸ್ಥರು ತಳ್ಳಿಹಾಕಿದ್ದರು ಹಾಗಾಗಿ ಅವರ ಆದೇಶವನ್ನು ಆಧರಿಸಿ ಶ್ರೀ ಎಸ್.ವಿ.ಲೋಕಪ್ಪ, ವನಪಾಲಕ (ಆಗಿನ ಅರಣ್ಯ ರಕ್ಷಕ) ಇವರಿಗೆ ಅಭಿಯೋಜನೆಗೆ ಒಳಪಡಿಸಲು ನೀಡಲಾಗಿದ್ದ ಮಂಜೂರಾತಿ ಆದೇಶವನ್ನು ಉಲ್ಲೇಖ(6)ರ ಆದೇಶ ದಿನಾಂಕ:15-07-2003ರಂದು ಹಿಂದಕ್ಕೆ ಪಡೆಯಲಾಗಿತ್ತು, ಆದರೆ ಈ ಪ್ರಕರಣದಲ್ಲಿ ಪ್ರಸ್ತುತ ಪೋಲೀಸ್ ಮಹಾ ನಿರೀಕ್ಷಕರು, ಲೋಕಾಯುಕ್ತ, ಬೆಂಗಳೂರು ಇವರು ಸರ್ಕಾರಕ್ಕೆ ವಿಶಾಸಿಸಿದ ಉಲ್ಲೇಖ (4)ರ ದಿನಾಂಕ:05-02-2004ರ ಪತ್ರದ ಮೂಲಕ ಸದರಿ ಪ್ರಕರಣದಲ್ಲಿ ಶ್ರೀ ಎಂ.ಬಿ.ಶಾಂತಕುಮಾರ್, ವಲಯ ಅರಣ್ಯಾಧಿಕಾರಿ ಮತ್ತು ಶ್ರೀ ಎಸ್.ವಿ.ಲೋಕಪ್ಪ, ವನಪಾಲಕ (ಆಗಿನ ಅರಣ್ಯ ರಕ್ಷಕ) ಇವರು ಸಕ್ಷಮ ಪ್ರಾಧಿಕಾರಿಯನ್ನು ತಪ್ಪುದಾರಿಗೆ ಎಳೆದು ತಮ್ಮ ವಿರುದ್ಧ ಲೋಕಾಯುಕ್ತ ಅಧಿಕಾರಿಗಳು ಭ್ರಷ್ಟಾಚಾರದಡಿಯಲ್ಲಿ ದಾಖಲಿಸಿಕೊಂಡಿರುವ ಕೇಸಿನಿಂದ ತಪ್ಪಿಸಿಕೊಳ್ಳಲು ಅರಣ್ಯ ಇಲಾಖೆಯ ಎಫ್.ಓ.ಸಿ.ವಹಿಯಲ್ಲಿ ತಿದ್ದುಪಡಿ ಮಾಡಿ ಬೇರೆ ಕೇಸಿನ ಮಾಹಿತಿಯನ್ನು ಸೇರಿಸಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಹಿಂದಿನ ಅಪರಾಧದ ಜೊತೆಗೆ ಭಾರತೀಯ ದಂಡ ಸಂಹಿತೆಯ, ಕಲಂ-465, 466, 469 ಮತ್ತು 471ರಡಿ ಕೂಡ ಇನ್ನೂ ಹೆಚ್ಚಿನ ಅಪರಾಧ ಎಸಗಿರುವುದು ತನಿಖೆಯಿಂದ ವ್ಯಕ್ತವಾಗಿದೆ ಎಂದು ಹೇಳುತ್ತಾ ಇದಕ್ಕೆ ಪೂರಕವಾಗಿ ಈ ಕೆಳಕಂಡ ಅಂಶಗಳನ್ನು ಸರ್ಕಾರದ ಗಮನಕ್ಕೆ ತಂದಿರುತ್ತಾರೆ.

1. ಅರಣ್ಯ ಅಪರಾಧ ಮೊಕದ್ದಮೆ ಪ್ರಥಮವರ್ತಮಾನ ವರದಿ ಸಂಖ್ಯೆ:098201 ದಿ:5-5-2002 ಎಂದು ನಮೂದಿಸಿದೆ. ಅರಣ್ಯ ಅಪರಾಧದ ವಹಿಯ ಪುಟ ಸಂಖ್ಯೆ:58 ಮತ್ತು 59ರ ಕೊನೆಯ ಮೊಕದ್ದಮೆ ಸಂಖ್ಯೆ:20ರ ಪ್ರಥಮ ವರ್ತಮಾನ ವರದಿ ಸಂಖ್ಯೆ:098139 ಹಾಗೂ ದಿನಾಂಕ: 22-5-2002 ಎಂದು ಕಂಡು ಬಂದಿರುತ್ತದೆ.

2. ತನಿಖಾಧಿಕಾರಿಯವರು ಆರೋಪಿತರನ್ನು ಹಿಡಿಯಲು ಬಲೆ ಬೀಸಿದ ದಿನಾಂಕದಂದು ದಾಖಲಾದ ಅರಣ್ಯ ಅಪರಾಧ ಮೊಕದ್ದಮೆಯ ಸಂಖ್ಯೆ: 12/02-03 ದಿ:28-04-2002 ಹಾಗು ಪ್ರಥಮ ವರ್ತಮಾನ ವರದಿ ಸಂಖ್ಯೆ:098073 ಆಗಿತ್ತು. ಈ ಮೊಕದ್ದಮೆಯಲ್ಲಿ ಕೊಟ್ರಯ್ಯ ಬೆಟ್ಟದಕುರ್ಲಿ ನಿವಾಸಿ ಆಪಾದಿತರಾಗಿರುತ್ತಾರೆ. ಸಂಬಂಧಪಟ್ಟ ಅರಣ್ಯಾಧಿಕಾರಿ ಶ್ರೀ ಷಣ್ಮುಖಪ್ಪ ಆಗಿರುತ್ತಾರೆ. ಹೀಗಿರುವಾಗ ಅದೇ ಅರಣ್ಯ ಅಪರಾಧದ ಮೊಕದ್ದಮೆ ಸಂಖ್ಯೆ:12/2002-03ರಲ್ಲಿ ದಿನಾಂಕ:05-05-2002 ರಂದು ಬೇರೆ ಪ್ರಥಮ ವರ್ತಮಾನ ವರದಿ ಸಂಖ್ಯೆ:098201ರಲ್ಲಿ ಶ್ರೀ ಕಲವೀರಪ್ಪರವರು ಆರೋಪಿತರಾಗಿ ದಾಖಲಾಗಲು ಹೇಗೆ ಸಾಧ್ಯ?
3. ತನಿಖೆಯ ಸಮಯದಲ್ಲಿ ತನಿಖಾಧಿಕಾರಿಗಳು ಮೇಲೆ ನಮೂದಿಸಿರುವ ಮೊಕದ್ದಮೆ ಸಂಖ್ಯೆ:20ನೇದರ ಪ್ರಥಮ ವರ್ತಮಾನ ವರದಿ ಸಂಖ್ಯೆ:098139 ದಿ:22-05-2002ರ ದೃಢೀಕೃತ ನಕಲುಗಳನ್ನು ಪಡೆದಿರುತ್ತಾರೆ. ಆದುದರಿಂದ ಇದೇ ನಿಜವಾದ ದಾಖಲೆಯಾಗಿರುತ್ತದೆ.
4. ಮೊಕದ್ದಮೆ ಸಂಖ್ಯೆ:12/2002-03ಕ್ಕೆ ಬಳಸಿರುವ ಪ್ರಥಮ ವರ್ತಮಾನ ವರದಿ ಸಂಖ್ಯೆ:098201 ಹೊಸದಾಗಿ ವನಪಾಲಕ ಶ್ರೀ ಎನ್, ಬಸವರಾಜಪ್ಪ ಇವರಿಗೆ ಇವರು ಕೊಟ್ಟು ದಾಖಲಿಸಿದ ಪ್ರಕರಣವಾಗಿರುತ್ತದೆ. ಇದಕ್ಕೆ ಪೂರ್ವದಲ್ಲಿ ಎನ್, ಬಸವರಾಜಪ್ಪ, ವನಪಾಲಕ ಇವರಿಗೆ ಪ್ರಥಮ ವರ್ತಮಾನ ವರದಿ ರಿಜಿಸ್ಟರನ್ನು ಕೊಟ್ಟಿರಲಿಲ್ಲ ಎಂಬುದು ತನಿಖೆಯ ಕಾಲಕ್ಕೆ ಕಛೇರಿಯ ದಾಖಲೆಯಿಂದ ಮನವರಿಕೆಯಾಗಿರುತ್ತದೆ. ಆದುದರಿಂದ ಸುಳ್ಳು ಮೊಕದ್ದಮೆ ದಾಖಲಿಸಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ.
5. ತನಿಖೆಯ ದಾಖಲೆಗಳನ್ನು ಪರಿಶೀಲಿಸಲಾಗಿ ತನಿಖಾಧಿಕಾರಿಗಳು ಅರಣ್ಯ ಮೊಕದ್ದಮೆ ವಹಿಯನ್ನು ಪೂರ್ಣವಾಗಿ, ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:20ರವರೆಗೂ ಪರಿಶೀಲಿಸಿರುತ್ತಾರೆ. ಸಕ್ಷಮ ಪ್ರಾಧಿಕಾರಿಯವರ ವರದಿಯಲ್ಲಿ ನಮೂದಿಸಿರುವಂತೆ ಅರಣ್ಯ ಮೊಕದ್ದಮೆ ಸಂಖ್ಯೆ:12/2002-03ನೇದ್ದು ದಿನಾಂಕ:28-04-2002ರ ಪ್ರಥಮ ವರ್ತಮಾನ ವರದಿ ಸಂಖ್ಯೆ:098073ನೇದ್ದರಲ್ಲಿ ನೋಂದಣಿಯಾಗಿದ್ದು, ಕೊಟ್ರಯ್ಯ, ಬೆಟ್ಟದಕುರ್ಲಿ ನಿವಾಸಿ ಎಂಬುವವರು ಅಪರಾಧಿಯಾಗಿರುತ್ತಾರೆ. ತನಿಖಾಧಿಕಾರಿಗಳು ಅರಣ್ಯ ಮೊಕದ್ದಮೆ ಸಂಖ್ಯೆ:15 ರಿಂದ 20ರವರೆಗೆ ಮಾತ್ರ ದೃಢೀಕೃತ ನಕಲು ಪಡೆದುಕೊಂಡಿರುವುದರಿಂದ ಅದರ ಹಿಂದಿನ ಸಂಖ್ಯೆ ಅಂದರೆ 14ರ ನಂತರ 14(ಬಿ) ಎಂಬ ಹೊಸ ಕ್ರಮ ಸಂಖ್ಯೆಯನ್ನು ಮಧ್ಯ ಸೇರಿಸಿರುತ್ತಾರೆ.
6. ಸಕ್ಷಮ ಪ್ರಾಧಿಕಾರಿಯವರ ವರದಿಯಲ್ಲಿ ಅರಣ್ಯ ಮೊಕದ್ದಮೆ ಸಂಖ್ಯೆ:12/2002-03 ನೇದ್ದನ್ನು ದಿನಾಂಕ:05-05-2002ರಂದು ದಾಖಲಾದ ಪ್ರಥಮ ವರ್ತಮಾನ ವರದಿ ಸಂಖ್ಯೆ:098201 ಎಂದು ನಮೂದಾಗಿದೆ. ಇದರ ಬಗ್ಗೆ ದಾಖಲೆಗಳನ್ನು ಪರಿಶೀಲಿಸಲಾಗಿ ದಿನಾಂಕ:05-05-2002ರಂದು ಭಾನುವಾರ ಆಗಿದ್ದು, ಮೊಕದ್ದಮೆ ಸಂಖ್ಯೆ:12/2002-03ರ ಪ್ರಥಮ ವರ್ತಮಾನ ವರದಿ ಸಂಖ್ಯೆ: 098201ಕ್ಕೆ ಸಂಬಂಧಿಸಿದ ಮಾಹಿತಿ ಮಾನ್ಯ ನ್ಯಾಯಾಲಯಕ್ಕೆ ದಿನಾಂಕ:07-05-2002ರಂದು ತಲುಪಿಸಿರುವ ಹಾಗೆ ನಮೂದಿಸಿರುತ್ತದೆ.
7. ಸಕ್ಷಮ ಪ್ರಾಧಿಕಾರಿಯವರು ನಮೂದಿಸಿರುವ ವಿಷಯಗಳು ತನಿಖಾಧಿಕಾರಿಗಳು ಪರಿಶೀಲಿಸಿದ ನಿಜವಾದ ಮೂಲ ದಾಖಲೆಗಳಿಗೆ ತಾಳೆಯಾಗದೆ ವಿಪರ್ಯಾಸವಾಗಿದ್ದು ಅವು ನಂತರ ಆರೋಪಿತರು ತಮ್ಮ ರಕ್ಷಣೆಗಾಗಿ ಸೃಷ್ಠಿಸಿದ ಸುಳ್ಳು ದಾಖಲೆಗಳು ಎಂಬುದು ಸ್ಪಷ್ಟವಾಗಿರುತ್ತದೆ.
8. ಟ್ರ್ಯಾಪ್ ಆದ ನಂತರ ಮಾಡಿದ ಪಂಚನಾಮೆಯ ಸಮಯದಲ್ಲಿ ಆರೋಪಿ-1 ಶ್ರೀ ಎಂ.ಬಿ.ಶಾಂತಕುಮಾರ್, ಆರೋಪಿ-2 ಶ್ರೀ ಎಸ್.ವಿ.ಲೋಕಪ್ಪರವರು ತನಿಖಾಧಿಕಾರಿಯವರ ಮುಂದೆ ಸ್ವಇಚ್ಛೆ ಹೇಳಿಕೆಗಳನ್ನು ನೀಡಿದ್ದು, ಆ ಸಮಯದಲ್ಲಿ ಅರಣ್ಯ ಅಪರಾಧ ಮೊಕದ್ದಮೆ ದಾಖಲಾದ ಬಗ್ಗೆ ಏನೂ ಹೇಳಿರುವುದಿಲ್ಲ.
9. ಫಿರ್ಯಾದುದಾರ ಶ್ರೀ ಕಲವೀರಪ್ಪರವರು ದಿನಾಂಕ:06-05-2002ರಂದು ಸ್ವಪ್ರೇರಣೆಯಿಂದ ನೀಡಿದ ಹೇಳಿಕೆಯಲ್ಲಿ ರೂ.1000-00ಗಳ ದಂಡವನ್ನು ಸರ್ಕಾರಕ್ಕೆ ಪಾವತಿಸಲು ಒಪ್ಪಿರುವುದಾಗಿ ನಮೂದಿಸಲಾಗಿದೆ. ಸದರಿ ವಿಷಯವನ್ನು ತನಿಖೆ ಸಮಯದಲ್ಲಿ ಫಿರ್ಯಾದುದಾರರು ಸ್ಪಷ್ಟವಾಗಿ ತಿರಸ್ಕರಿಸಿರುತ್ತಾರೆ. ದಿನಾಂಕ:05-05-2002ರಂದು ದಾಖಲೆಯಾಯಿತೆಂದು ಸೃಷ್ಠಿಸಿರುವ ಅರಣ್ಯ ಮೊಕದ್ದಮೆಯಲ್ಲಿ ಸದರಿಯವರ ಸ್ವಇಚ್ಛೆ ಹೇಳಿಕೆ ದಿನಾಂಕ:06-05-2002ರಂದು ನೀಡಿರುವುದಾಗಿ ನಮೂದಿಸಿದೆ. ಆದರೆ, ರೂ.1000/-ಗಳ ದಂಡದ ಪಾವತಿ ರಶೀದಿ ನೀಡಿರುವ ಬಗ್ಗೆ ಎಲ್ಲೂ ನಮೂದಾಗಿರುವುದಿಲ್ಲ. ಸದರಿ ಅರಣ್ಯ ಮೊಕದ್ದಮೆಯ ತನಿಖೆಯನ್ನು ಮತ್ತು ಸ್ವಇಚ್ಛೆ ಹೇಳಿಕೆಯನ್ನು ಪಂಚರ ಸಮಕ್ಷಮ ಮಾಡಿರುವ ಬಗ್ಗೆ ಎಲ್ಲಿಯೂ ನಮೂದಾಗಿರುವುದಿಲ್ಲ.
10. ಸದರಿ ಅರಣ್ಯ ಮೊಕದ್ದಮೆಯಲ್ಲಿ ಕಿಟಕಿ ಬಾಗಿಲುಗಳನ್ನು ಜಫ್ತು ಮಾಡಿದರೆಂದು ಹೇಳಲಾದ ನಿವೇಶನ ಸಂಖ್ಯೆ:6 ಮತ್ತು 7 ಆನವಟ್ಟಿ ಈ ಜಾಗವು ಶ್ರೀ ಮನೋಹರ್ (ಪವತಿ) ಅವರ ಹೆಂಡತಿ ಶ್ರೀಮತಿ ಶೈಲಾ ಎಂಬುವವರಿಗೆ ಸೇರಿರುತ್ತದೆ. ಈ ಜಾಗಕ್ಕೂ ಟ್ರ್ಯಾಪ್ ಪ್ರಕರಣದ ಫಿರ್ಯಾದುದಾರ ಕಲವೀರಪ್ಪನವರಿಗೂ ಸಂಬಂಧವಿಲ್ಲ.
11. ಸ್ವಇಚ್ಛೆಯ ಹೇಳಿಕೆ ಎಂದು ಹೇಳಲಾದ ದಾಖಲೆಯನ್ನು ಟ್ರ್ಯಾಪ್ ಆದ ಮರುದಿನ ಶ್ರೀ ಬಿ.ಸೋಮರಾಜ್, ವನಪಾಲಕ ಅನ್ನುವವರು ಬರೆದಿದ್ದು ನಂತರ ಶ್ರೀ ಕಲವೀರಪ್ಪನವರ ಸಹಿಯನ್ನು (ಫೋರ್ಜರಿ) ನಕಲು ಮಾಡಲಾಗಿದೆ.
12. ವಲಯ ಅರಣ್ಯಾಧಿಕಾರಿಗಳಿಗೆ ಅರಣ್ಯ ಕೈಪಿಡಿಯ ನಿಯಮ ಮೇರೆಗೆ ದಂಡದ ಹಣವನ್ನು ಸ್ವೀಕರಿಸಲು ಅಧಿಕಾರವಿದ್ದರೂ, ಪ್ರಸ್ತುತ ಪ್ರಕರಣದಲ್ಲಿ ಆರೋಪಿತರಾಗಿರುವ ಅರಣ್ಯ ಅಧಿಕಾರಿಗಳು ಫಿರ್ಯಾದುದಾರ ಶ್ರೀ ಕಲವೀರಪ್ಪರವರಿಂದ ದಂಡ ನೀಡಲು ಒಪ್ಪಿರುವ ಬಗ್ಗೆಯಾಗಲೀ ಅಥವಾ ದಂಡವನ್ನು ಸ್ವೀಕರಿಸಿದ ಬಗ್ಗೆಯಾಗಲೀ ದಾಖಲೆಗಳಿಂದ ಸಾಬೀತಾಗಿರುವುದಿಲ್ಲ.
13. ಅರಣ್ಯ ಮೊಕದ್ದಮೆ ಸಂಖ್ಯೆ:12/2002-03ರ ಪ್ರಥಮ ವರ್ತಮಾನ ವರದಿ ಸಂಖ್ಯೆ: 098201ನೇದ್ದರಲ್ಲಿ ದಿನಾಂಕ:05-05-2002ರಂದು ಜಫ್ತು ಮಾಡಿದ ವಿಷಯದ ಬಗ್ಗೆ ಮಾನ್ಯ ನ್ಯಾಯಾಲಯಕ್ಕಾಗಲೀ ಅಥವಾ ಅರಣ್ಯ ಇಲಾಖೆಯ ಹಿರಿಯ ಅಧಿಕಾರಿಗಳಿಗಾಗಲೀ ವರದಿ ಮಾಡಿರುವ ಬಗ್ಗೆ ಏನೂ ನಮೂದಾಗಿರುವುದಿಲ್ಲ. ಆದುದರಿಂದ ದಿ:22-5-2002ರಂದು

ತನಿಖಾಧಿಕಾರಿಯವರು ವಲಯ ಅರಣ್ಯಾಧಿಕಾರಿಗಳ ಕಛೇರಿ ಆವರಣದಲ್ಲಿ ಕಂಡ ಕಿಟಕಿ ಚೌಕಟ್ಟುಗಳು ಯಾವುದೇ ದಾಖಲೆಗಳಲ್ಲಿ ನಮೂದಿಸದೇ ಅನಧಿಕೃತವಾಗಿ ಇಟ್ಟಿದ್ದ ಕಿಟಕಿ ಚೌಕಟ್ಟುಗಳು ಎಂಬುದು ನಿರ್ವಿವಾದವಾಗಿರುತ್ತದೆ.

14. ಟ್ರ್ಯಾಪ್ ಸಮಯದಲ್ಲಿ ಆಪಾದಿತರು ತಮ್ಮ ಸ್ವಂತ ಕೈ ಬರಹದಲ್ಲಿ ಬರೆದುಕೊಟ್ಟ ತಮ್ಮ ರಕ್ಷಣಾತ್ಮಕ ಹೇಳಿಕೆಯಲ್ಲಿ ಸದರಿ ಅರಣ್ಯ ಮೊಕದ್ದಮೆ ಮತ್ತು ಕಲವೀರಪ್ಪನವರ ಸ್ವಇಚ್ಛೆ ಹೇಳಿಕೆಯಲ್ಲಿ ಸದರಿ ಅರಣ್ಯ ಮೊಕದ್ದಮೆ ಮತ್ತು ಕಲವೀರಪ್ಪನವರ ಸ್ವಇಚ್ಛೆ ಹೇಳಿಕೆ ಅಥವಾ ದಂಡ ಕಟ್ಟಿಸಿಕೊಳ್ಳುವ ಬಗ್ಗೆ ಏನೂ ಹೇಳಿರುವುದಿಲ್ಲ.

15. ತನಿಖಾಧಿಕಾರಿಗಳು, ಶ್ರೀ ರವೀಂದ್ರ ಎಸ್.ಹೆಗಡೆ, ಮಾನ್ಯ ವ್ಯವಹಾರ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ಸೊರಬರವರನ್ನು ಲಿಖಿತ ಮೂಲಕ ಸಂಪರ್ಕಿಸಿ ಉತ್ತರ ಪಡೆದಿದ್ದು, ಸದರಿ ಪತ್ರದಿಂದ ತಿಳಿದು ಬರುವುದೇನೆಂದರೆ, ಅರಣ್ಯಾಧಿಕಾರಿಗಳು ಕಳುಹಿಸಿದರೆನ್ನಲಾದ ಅರಣ್ಯ ಅಪರಾಧ ಸಂಖ್ಯೆ:12/2002-03 ನೇದ್ದರ ಲಕೋಟೆ ದಿನಾಂಕ:07-05-2002ರಂದು ಸದರಿ ನ್ಯಾಯಾಧೀಶರ ಲಘು ಸಹಿಯನ್ನು ಒಳಗೊಂಡಂತೆ ಇರುತ್ತದೆ. ಆದರೆ, ನಿಜವಾಗಿ ಸದರಿ ನ್ಯಾಯಾಧೀಶರು ಸೊರಬಕ್ಕೆ ವರ್ಗವಾಗಿ ಬಂದು ದಿನಾಂಕ:16-9-2002ರಂದು ಹುದ್ದೆ ಸ್ವೀಕರಿಸಿ ಕರ್ತವ್ಯಕ್ಕೆ ವರದಿಮಾಡಿಕೊಂಡಿರುತ್ತಾರೆ. ಇದರಿಂದ ಸದರಿ ವಲಯ ಅರಣ್ಯಾಧಿಕಾರಿಗಳು ದಿನಾಂಕ:07-05-2002ರಂದು ಮೊಕದ್ದಮೆ ಸಂಖ್ಯೆ:12/2002-03ರ ಲಕೋಟೆಯನ್ನು ಸದರಿ ನ್ಯಾಯಾಧೀಶರಿಗೆ ನೀಡಿರುವಂತೆ ತೋರಿಸಿರುವುದು ಅಪಾದಿತರು ಸೃಷ್ಠಿಸಿದ ಸುಳ್ಳಿನ ದಾಖಲೆಯಾಗಿರುವುದು ಸ್ಪಷ್ಟವಾಗಿರುತ್ತದೆ.

16. ಎಫ್.ಒ.ಸಿ. ಮೂಲ ವಹಿಯನ್ನು ಪರಿಶೀಲಿಸಿದ್ದು, ಅದರಲ್ಲಿ ಪುಟ ಸಂಖ್ಯೆ:55ರಲ್ಲಿ ಎಫ್.ಒ.ಸಿ. ಸಂಖ್ಯೆ:12/2002-03 ದಿನಾಂಕ:28-4-2002 ಅಪರಾಧಿ ಕೊಟ್ರಯ್ಯ ಎಂಬುದಾಗಿ ಇದ್ದುದನ್ನು ಅದರ ಮೇಲೆ ಹಾಳೆ ಅಂಟಿಸಿ ನಂತರ ಅದೇ ಎಫ್.ಒ.ಸಿ. 12/2002-03 ದಿನಾಂಕ:05-05-2002ನೇದ್ದನ್ನು ಪುಟ 56ರಲ್ಲಿ ದುರುದ್ದೇಶದಿಂದ ಸೇರಿಸಿ ಕಲವೀರಪ್ಪ (ಲೋಕಾಯುಕ್ತ ಕೇಸಿನ ಫಿರ್ಯಾದಿ)ರವರನ್ನು ಅಪರಾಧಿಯನ್ನಾಗಿ ಪರಿಗಣಿಸಿರುವುದು ಸ್ಪಷ್ಟವಾಗಿರುತ್ತದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ, ಸೂಕ್ತ ನಿರ್ಧಾರವನ್ನು ತೆಗೆದುಕೊಳ್ಳುವಂತೆ ಸರ್ಕಾರವು ಉಲ್ಲೇಖ (1)ರ ಪತ್ರದಲ್ಲಿ ಸೂಚನೆ ನೀಡಿರುತ್ತದೆ. ಈ ಸೂಚನೆ ಮೇರೆಗೆ ಮೇಲ್ಕಂಡ ಎಲ್ಲಾ ಅಂಶಗಳನ್ನು ದೃಢಪಡಿಸಿಕೊಳ್ಳುವ ಸಲುವಾಗಿ ಇಲಾಖಾ ಮುಖ್ಯಸ್ತರು ಮೂಲ ಎಫ್.ಒ.ಸಿ. ವಹಿಯನ್ನು ಪೋಲೀಸ್ ಮಹಾನಿರ್ದೇಶಕರು, ಲೋಕಾಯುಕ್ತ ಇವರ ಕಛೇರಿಯಿಂದ ತರಿಸಿ ಪರಿಶೀಲಿಸಿದ್ದು, ಆರೋಪಿತರಾದ ಶ್ರೀ ಎಂ.ಬಿ.ಶಾಂತಕುಮಾರ್, ಇವರು ಇತರೆ ಸಿಬ್ಬಂದಿ ಜೊತೆಗೂಡಿ ತಾವು ಅಕ್ರಮವಾಗಿ ಸ್ವೀಕರಿಸಿದ ಲಂಚದ ಪ್ರಕರಣವನ್ನು ಮುಚ್ಚಿ ಹಾಕುವ ಉದ್ದೇಶದಿಂದ ಟ್ರ್ಯಾಪ್ ಪ್ರಕರಣ ಜರುಗಿಸಿದ ನಂತರ ದಾಖಲೆಗಳನ್ನು ತಿದ್ದಿರುವುದಲ್ಲದೆ, ವಾಸ್ತವವಾಗಿ ಶ್ರೀ ಕಲವೀರಪ್ಪನವರ ವಿರುದ್ಧ ದಾಖಲಾಗಿದೆ ಎನ್ನಲಾದ ಅರಣ್ಯ ಮೊಕದ್ದಮೆ ಸಂಖ್ಯೆ:12/02-03ಕ್ಕೆ ಸಂಬಂಧಿಸಿದಂತೆ ಪ್ರಥಮ ಮಾಹಿತಿ ವರದಿಯನ್ನು ದಿನಾಂಕ:07-05-2002ರಂದು ನ್ಯಾಯಾಲಯಕ್ಕೆ ಸಲ್ಲಿಸದಿದ್ದರೂ ಸಹ ಸಲ್ಲಿಸುರುವುದಾಗಿ ದಾಖಲೆಯನ್ನು ಸೃಷ್ಠಿಸುವ ಮೂಲಕ ಹೆಚ್ಚುವರಿ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ವ್ಯಕ್ತವಾಗುತ್ತದೆ. ಈ ಅಕ್ರಮವನ್ನು ದೃಢೀಕರಿಸಲು ಸೊರಬದ ವ್ಯವಹಾರ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ ಇವರು ದಿನಾಂಕ:09-09-2003ರಂದು ಪೋಲೀಸ್ ಇನ್ಸ್‌ಪೆಕ್ಟರ್, ಲೋಕಾಯುಕ್ತ, ಶಿವಮೊಗ್ಗ ಇವರಿಗೆ ಬರೆದಿರುವ ಸಂಖ್ಯೆ:755/2003ವುಳ್ಳ ಪತ್ರವು ಪುಷ್ಠಿ ನೀಡುತ್ತದೆಂದು ಅಭಿಪ್ರಾಯಿಸಿ ಈ ಎಲ್ಲಾ ವಿಚಾರಗಳನ್ನು ವಿವರವಾಗಿ ವಿಶ್ಲೇಷಿಸಿದ್ದು, ಈ ಪ್ರಕರಣದ ಆರೋಪಿ-1 ಆದ ಶ್ರೀ ಎಂ.ಬಿ.ಶಾಂತಕುಮಾರ್, ವಲಯ ಅರಣ್ಯಾಧಿಕಾರಿ, ಇವರು ಹಾಗೂ ಆರೋಪಿ -2 ಆದ ಶ್ರೀ ಎಸ್.ವಿ.ಲೋಕಪ್ಪ, ಅರಣ್ಯ ರಕ್ಷಕ ಇವರುಗಳು ದಾಖಲೆಗಳನ್ನು ತಿದ್ದಿ ಸರ್ಕಾರಕ್ಕೆ ವಂಚನೆಯನ್ನು ಎಸಗಿರುವುದು ಮತ್ತು ಇದರಿಂದ ಸಕ್ಷಮ ಪ್ರಾಧಿಕಾರವನ್ನು ತಪ್ಪು ದಾರಿಗೆ ಎಳೆದಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆಯಾದ್ದರಿಂದ ಇವರು 1988ರ ಭ್ರಷ್ಟಾಚಾರ ನಿರೋಧ ಕಾಯ್ದೆಯ, ಕಲಂ,-7, 13(1)ರ ಜೊತೆಯಲ್ಲಿ ಓದಲಾದ ಕಲಂ-13(2)ರ ಪ್ರಕಾರ ಮತ್ತು ಭಾರತೀಯ ದಂಡ ಸಂಹಿತೆಯ ಕಲಂ-465, 466, 469 ಮತ್ತು 471ರ ಅಡಿಯಲ್ಲಿ ಅಪರಾಧ ಎಸಗಿರುವುದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಅಲ್ಲದೆ, ಮೇಲೆ ನಮೂದಿಸಿದ ಇಬ್ಬರೂ ಆರೋಪಿಗಳಿಗೆ ಸುಳ್ಳು ದಾಖಲೆಗಳನ್ನು ಸೃಷ್ಟಿಸಲು ಮತ್ತು ಶ್ರೀ ಕಲವೀರಪ್ಪ ಎನ್ನುವವರ ವಿರುದ್ಧ ಸುಳ್ಳು ಮೊಕದ್ದಮೆ ದಾಖಲಿಸಲು ನಡೆಸಿರುವ ಪಿತೂರಿಗೆ ನೆರವಾಗಿ ಸದರಿ ಅಪರಾಧದಲ್ಲಿ ಭಾಗಿಯಾಗಿರುವ ಶ್ರೀ ಎನ್.ಬಸವರಾಜ, ವನಪಾಲಕ (ಈಗ ನಿವೃತ್ತ), ಶ್ರೀ ಬಿ.ಸೋಮರಾಜ್, ವನಪಾಲಕ ಮತ್ತು ಶ್ರೀ ಎನ್.ಕೃಷ್ಣಮೂರ್ತಿ, ಅರಣ್ಯ ರಕ್ಷಕ ಇವರು ಸಹ ಭಾರತೀಯ ದಂಡ ಸಂಹಿತೆಯ ಕಲಂ-109, 114, 120(ಬಿ), 211ರ ಸಹಿತ 465, 466, 469 ಮತ್ತು 471ರ ಕಲಂಗಳಡಿಯಲ್ಲಿ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ವ್ಯಕ್ತವಾಗುತ್ತದೆಂದು ಅಭಿಪ್ರಾಯಿಸಿ ಇಲಾಖಾ ಮುಖ್ಯಸ್ಥರು ವಲಯ ಅರಣ್ಯಾಧಿಕಾರಿಯವರ ಹುದ್ದೆಗೆ ಮಾತ್ರ ಸಕ್ಷಮ ಪ್ರಾಧಿಕಾರವಾದ ಕಾರಣ ಈ ಪ್ರಕರಣದ ಆರೋಪಿ-1 ಆದ ಶ್ರೀ ಎಂ.ಬಿ.ಶಾಂತಕುಮಾರ್, ವಲಯ ಅರಣ್ಯಾಧಿಕಾರಿ ಇವರ ಮೇಲೆ ನಮೂದಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಅಪರಾಧವೆಸಗಿರುವುದು ದೃಢಪಟ್ಟಿದೆ ಎಂದು ನಿರ್ಧರಿಸಿ ಅವರ ಕಛೇರಿ ಆದೇಶ ಕ್ರಮಾಂಕ:ಬಿ2/ಒಇವಿ/ವಿವ/48/02-03 ದಿ:08-12-2006ರ ಮೂಲಕ ಘನ ನ್ಯಾಯಾಲಯದಲ್ಲಿ ಮೊಕದ್ದಮೆ ದಾಖಲಿಸಲು ಮಂಜೂರಾತಿ ನೀಡಿ ಉಳಿದ ಆರೋಪಿಗಳಿಗೆ ಸಂಬಂಧಿಸಿದಂತೆ ಕೆಳಸಹಿದಾರರು ಸಕ್ಷಮ ಪ್ರಾಧಿಕಾರವಾಗಿರುವುದರಿಂದ ಈ ಕಛೇರಿಯಿಂದ ಸೂಕ್ತ ಆದೇಶವನ್ನು ಹೊರಡಿಸಲು ಉಲ್ಲೇಖ(2)ರ ಪತ್ರ ದಿ:11-12-2006 ಮತ್ತು (4)ರ ಪತ್ರ ದಿ:16-12-2006ರ ಮೂಲಕ ನಿರ್ದೇಶನವಾಗಿರುತ್ತದೆ.

ಮುಂದುವರೆದು, ಈ ಪ್ರಕರಣದಲ್ಲಿ ಮೂಲ ದಾಖಲಾತಿಗಳನ್ನು ಇಲಾಖಾ ಮುಖ್ಯಸ್ಥರು ಈಗಾಗಲೇ ಸಮಗ್ರವಾಗಿ ಪರಿಶೀಲಿಸಿದ್ದು ಶ್ರೀ ಎಂ.ಬಿ.ಶಾಂತಕುಮಾರ್, ವಲಯ ಅರಣ್ಯಾಧಿಕಾರಿ, ಶ್ರೀ ಎಸ್.ವಿ.ಲೋಕಪ್ಪ, ಅರಣ್ಯ ರಕ್ಷಕ (ಈಗಿನ ವನಪಾಲಕ) ಶ್ರೀ ಬಿ.ಸೋಮರಾಜ್, ವನಪಾಲಕ, ಶ್ರೀ ಎನ್.ಬಸವರಾಜು, ವನಪಾಲಕ(ಈಗ ನಿವೃತ್ತ) ಮತ್ತು ಶ್ರೀ ಎನ್.ಕೃಷ್ಣಮೂರ್ತಿ, ಅರಣ್ಯ ರಕ್ಷಕ ಇವರುಗಳು ಮೇಲೆ ನಮೂದಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಅಪರಾಧವೆಸಗಿರುವುದು ದೃಢಪಟ್ಟಿದೆಯೆಂದು ನಿರ್ಧರಿಸಿರುವ ಕಾರಣ ಪುನ: ಸದರಿ ದಾಖಲೆಗಳನ್ನು ಈ ಕಛೇರಿಯಲ್ಲಿ ಪರಿಶೀಲಿಸುವ ಪ್ರಮೇಯವಿರುವುದಿಲ್ಲ ಅಲ್ಲದೆ ಸದರಿ ಅಪರಾದದಲ್ಲಿ ಬಾಗಿಯಾಗಿರುವ ಶ್ರೀ ಎನ್, ಬಸವರಾಜು ವನಪಾಲಕರು

ದಿ:31-12-2003ರಂದು ಅನವಟ್ಟಿ ವಲಯದಲ್ಲಿ ಸೇವೆಯಿಂದ ನಿವೃತ್ತರಾಗಿರುವ ಕಾರಣ ಕೆಸಿಎಸ್‌ಆರ್-214(2)(ಬಿ)(i)ರ ಪ್ರಕಾರ ಇವರ ವಿರುದ್ಧ ಮೊಕ್ಕದ್ದಮೆ ಹೂಡಲು ಘನ ಸರ್ಕಾರವೆ ಮಂಜೂರಾತಿ ನೀಡಬೇಕಾಗಿರುವ ಹಿನ್ನೆಲೆಯಲ್ಲಿ ಇವರ ವಿಷಯದಲ್ಲಿ ಇಲಾಖಾ ಮುಖ್ಯಸ್ಥರಲ್ಲಿಗೆ ಪ್ರತ್ಯೇಕವಾಗಿ ಪತ್ರ ವ್ಯವಹರಿಸಿದ್ದು ಉಳಿದ ನೌಕರರು ಶ್ರೀ ಕಲವೀರಪ್ಪ ಎನ್ನುವವರ ವಿರುದ್ಧ ಸುಳ್ಳು ಮೊಕದ್ದಮೆ ದಾಖಲಿಸಲು ನಡೆಸಿರುವ ಪಿತೂರಿಗೆ ನೆರವಾಗಿರುವ ಆರೋಪಗಳಲ್ಲಿ ಸತ್ಯಾಂಶ ಇರುವುದು ಕಂಡುಬಂದಿರುವುದರಿಂದ ಮತ್ತು ಘನ ನ್ಯಾಯಾಲಯದಲ್ಲಿ ಸದರಿಯವರುಗಳ ವಿರುದ್ಧ ಮೊಕದ್ದಮೆ ಹೂಡುವುದು ಅಗತ್ಯವೆಂದು ಮನಗಂಡು ಸದರಿ ಆಪಾದಿತ ಸರ್ಕಾರಿ ನೌಕರರುಗಳನ್ನು 1988ರ ಭ್ರಷ್ಟಾಚಾರ ನಿರೋಧ ಕಾಯ್ದೆಯ, ಕಲಂ-7, 13(1) ಜೊತೆಯಲ್ಲಿ ಓದಲಾದ ಕಲಂ-13(2)ರ ಪ್ರಕಾರ ಅಭಿಯೋಜನೆಗೆ ಒಳಪಡಿಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸುತ್ತೇನೆ.

**ಆದೇಶ ಸಂಖ್ಯೆ:ಎ3/ಸಿಬ್ಬಂದಿ/ಲೋಕ/ಸಿಆರ್/76/2002-03, ಸಾಗರ, ದಿನಾಂಕ:28ನೇ ಡಿಸೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಸ್.ವಿ.ಲೋಕಪ್ಪ ವನಪಾಲಕ (ಆಗಿನ ಅರಣ್ಯ ರಕ್ಷಕ) ಇವರು 1988ರ ಭ್ರಷ್ಟಾಚಾರ ನಿರೋಧ ಕಾಯ್ದೆಯ, ಕಲಂ-7, 13(1) ಜೊತೆಯಲ್ಲಿ ಓದಲಾದ ಕಲಂ-13(2)ರ ಪ್ರಕಾರ ಮತ್ತು ಭಾರತೀಯ ದಂಡ ಸಂಹಿತೆಯ ಕಲಂ-465, 466, 469 ಮತ್ತು 471ರಡಿಯಲ್ಲಿ ಅಪರಾಧ ಎಸಗಿರುವುದರಿಂದ ಹಾಗೂ ಶ್ರೀ ಬಿ.ಸೋಮರಾಜ್, ವನಪಾಲಕ ಮತ್ತು ಶ್ರೀ ಎನ್.ಕೃಷ್ಣಮೂರ್ತಿ, ಅರಣ್ಯ ರಕ್ಷಕ ಇವರುಗಳು ಆಪಾದಿತರುಗಳಿಗೆ ಅಕ್ರಮವಾಗಿ ಸುಳ್ಳು ಮೊಕದ್ದಮೆ ದಾಖಲಿಸಲು ನೆರವಾಗಿ ಅಪರಾಧದಲ್ಲಿ ಭಾಗಿಯಾಗಿ ಭಾರತೀಯ ದಂಡ ಸಂಹಿತೆಯ ಕಲಂ-109, 114, 129(ಬಿ), 211 ರ ಸಹಿತ 465, 466, 469 ಮತ್ತು 471ರಡಿಯಲ್ಲಿ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುವ ಕಾರಣ ಈ ಎಲ್ಲಾ ಅರಣ್ಯ ಸಿಬ್ಬಂದಿಗಳನ್ನು 1988ರ ಭ್ರಷ್ಟಾಚಾರ ನಿರೋಧ ಕಾಯ್ದೆಯ, ಕಲಂ-19(ಅ) ಮತ್ತು ಭಾರತೀಯ ದಂಡ ಸಂಹಿತೆಯ ಕಲಂ-197ರಲ್ಲಿ ಕಲ್ಪಿಸಿರುವ ಅವಕಾಶಗಳ ಮೇರೆಗೆ ಶಿಕ್ಷಾರ್ಹವಾಗಿರುವ ಅಪರಾದಗಳ ವಿಷಯದಲ್ಲಿ ಸಕ್ಷಮ ಅಧಿಕಾರ ವ್ಯಾಪ್ತಿಯುಳ್ಳ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲು ಈ ನೌಕರರನ್ನು ಕೆಲಸದಿಂದ ತೆಗೆದುಹಾಕಲು ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಜಿ.ಜಯರಾಮಯ್ಯ, ಭಾ.ಅ.ಸೇ. ಉಪ ಅರಣ್ಯ ಸಂರಕ್ಷಣಾಧಿಕಾರಿ ಆದ ನಾನು ಈ ಮೂಲಕ ಮಂಜೂರಾತಿ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:28-12-2006ರಂದು ನನ್ನ ಕಛೇರಿಯ ಮೊಹರಿನೊಂದಿಗೆ ಹೊರಡಿಸಿರುತ್ತೇನೆ.

**ಜಿ.ಜಯರಾಮಯ್ಯ, ಭಾ.ಅ.ಸೇ.,**

ಪಿ.ಆರ್.82

ಉಪ ಅರಣ್ಯ ಸಂರಕ್ಷಣಾಧಿಕಾರಿ
ಹಾಗೂ ಸಕ್ಷಮ ಪ್ರಾಧಿಕಾರಿ,
ಸಾಗರ ವಿಭಾಗ, ಸಾಗರ.

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಸಾಗರ ವಿಭಾಗ, ಸಾಗರ**

**ಕರ್ತವ್ಯಕ್ಕೆ ಹಾಜರಾಗಲು ತಿಳುವಳಿಕೆ ಪತ್ರ**

**ಕ್ರ: 3:ಸಿಬ್ಬಂದಿ: ಅರಗೈಹಾ: ವಿವ-677/ 06-07, ದಿನಾಂಕ:27ನೇ ಜನವರಿ, 2007**

**ವಿಷಯ:** ಶ್ರೀ ಕೆ.ಎನ್. ದುರ್ಗಪ್ಪ, ಅರಣ್ಯ ರಕ್ಷಕ ಇವರು ಅನಧಿಕೃತ ಗೈರುಹಾಜರಿಯಾದ ಕಾರಣ ಇವರ ವಿರುದ್ಧ ಶಿಸ್ತುಕ್ರಮ ಕೈಗೊಳ್ಳುವ ಬಗ್ಗೆ.

**ಉಲ್ಲೇಖ:** 1) ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಶಿಕಾರಿಪುರ ಇವರ ವರದಿ ಕ್ರ: 783/ 06-07, ದಿನಾಂಕ:26.12.2006, ಸಂಖ್ಯೆ: 829/ 06-07 ದಿನಾಂಕ:05.01.2007.

2) ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಶಿಕಾರಿಪುರ ಇವರು ಶ್ರೀ ಕೆ.ಎನ್. ದುರ್ಗಪ್ಪ, ಅರಣ್ಯ ರಕ್ಷಕ ಇವರಿಗೆ ಜಾರಿ ಮಾಡಿದ ತಿಳುವಳಿಕೆ ಪತ್ರ ಕ್ರ: 738/ 06-07 ದಿನಾಂಕ:16.12.2006, ಸಂಖ್ಯೆ:767/ 06-07 ದಿನಾಂಕ:20.12.2006 ಮತ್ತು ಸಂಖ್ಯೆ: 790/06-07 ದಿನಾಂಕ:28.12.2006.

3) ಬಳೂರು ಶಾಖಾ ವನಪಾಲಕರ ವರದಿ ದಿನಾಂಕ:19.12.2006 ಮತ್ತು 26.12.2006.

ಶ್ರೀ ಕೆ.ಎನ್. ದುರ್ಗಪ್ಪ, ಅರಣ್ಯ ರಕ್ಷಕರಾದ ನೀವು ಶಿಕಾರಿಪುರ ವಲಯದ ಬಳೂರು ಗಸ್ತಿನಿಂದ ದಿನಾಂಕ:01.12.2006 ರಿಂದ ನಿಮ್ಮ ಶಾಖಾ ವನಪಾಲಕ ಅಥವಾ ವಲಯ ಅರಣ್ಯಾಧಿಕಾರಿಗಳ ಪೂರ್ವಾನುಮತಿಯಿಲ್ಲದೆ ಕರ್ತವ್ಯಕ್ಕೆ ಗೈರು ಹಾಜರಾಗಿ ಕರ್ತವ್ಯ ವಿಮುಖರಾಗಿರುವುದು ಉಲ್ಲೇಖ (1)ರ ಶಿಕಾರಿಪುರ ವಲಯ ಅರಣ್ಯಾಧಿಕಾರಿಗಳ ವರದಿಯ ಮೂಲಕ ವ್ಯಕ್ತವಾಗಿರುತ್ತದೆ.

ಅಲ್ಲದೇ ನಿಮಗೆ ಕರ್ತವ್ಯಕ್ಕೆ ಮರಳಲು ಉಲ್ಲೇಖ (2)ರ ನೋಟೀಸುಗಳ ಮೂಲಕ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ನಿಮ್ಮ ಎರಡು ಸ್ವಂತ ವಿಳಾಸಕ್ಕೆ ತಿಳುವಳಿಕೆ ಪತ್ರ ಜಾರಿ ಮಾಡಿದ್ದು, ಅವುಗಳ ಸಹ ನೀವು ತಿಳಿಸಿರುವ ವಿಳಾಸದಲ್ಲಿ ವಾಸ್ತವ್ಯ ಇರುವುದಿಲ್ಲವೆಂದು ವಾಪಾಸ್ಸು ಬಂದಿರುತ್ತವೆ. ನಿಮ್ಮ ಗೈರುಹಾಜರಿಯಿಂದಾಗಿ ನಿಮ್ಮ ಗಸ್ತಿನಲ್ಲಿ ಅಕ್ರಮ ಕಡಿತಲೆ/ ಅರಣ್ಯ ಒತ್ತುವರಿಯಂತಹ ಪ್ರಕರಣಗಳನ್ನು ತಡೆಗಟ್ಟಲು ಸಾಧ್ಯವಾಗುತ್ತಿಲ್ಲ. ಈ ರೀತಿಯ ನಿಮ್ಮ ಕರ್ತವ್ಯ ನಿರ್ಲಕ್ಷತೆಯಿಂದಾಗಿ ನಿಮ್ಮ ಗಸ್ತಿನಲ್ಲಿ ಜರುಗಬಹುದಾದ ಯಾವುದೇ ಆರ್ಥಿಕ ನಷ್ಟಕ್ಕೆ ನಿಮ್ಮನ್ನೇ ನೇರ ಹೊಣೆಗಾರರನ್ನಾಗಿ ಮಾಡಲಾಗುವುದು. ಹಾಗಾಗಿ ಈ ರೀತಿಯ ಅವಕಾಶಗಳಿಗೆ ಆಸ್ಪದ ನೀಡದೆ ಈ ಕೂಡಲೇ ನೀವು ಶಿಕಾರಿಪುರ ವಲಯ ಅರಣ್ಯಾಧಿಕಾರಿಗಳ ಸಮ್ಮುಖದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡು, ನಿಮ್ಮ ಗೈರುಹಾಜರಿ ಸಂಬಂಧವಾಗಿ ಸೂಕ್ತವಾದ ವಿವರಣೆಯನ್ನು ನಿಮ್ಮ ನಿಯಂತ್ರಣಾಧಿಕಾರಿಗಳ ಮೂಲಕ ಈ ಕಛೇರಿಗೆ ಕಳಿಸಲು ಸೂಚಿಸಿದೆ.

ತಪ್ಪಿದ್ದಲ್ಲಿ ನಿಮಗೆ ಅರಣ್ಯ ರಕ್ಷಕರಾಗಿ ಮುಂದುವರೆಯಲು ಆಸಕ್ತಿ ಇಲ್ಲವೆಂದು ಹಾಗೂ ನಿಮ್ಮ ಅಹವಾಲು ಈ ಬಗ್ಗೆ ಏನೂ ಇರುವುದಿಲ್ಲವೆಂದು ಭಾವಿಸಿ, ಸಿಸಿಎ ನಿಯಮಗಳ ರೀತ್ಯಾ ಶಿಸ್ತಿನ ಕ್ರಮಕ್ಕೆ ಒಳಪಡಿಸುವುದರ ಮೂಲಕ ನಿಮ್ಮನ್ನು ಕೆಲಸದಿಂದ ತೆಗೆದುಹಾಕಲಾಗುವುದು ತಿಳಿಯಿರಿ

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.128